Vol - 9 March 2010 Issue No. 03 Rs



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine






Mr. Scott A . Teare, International Director, Boy Scouts of America presented the Silver World Award to Mr. M.A. Khalid, State Secreatary & Chairman, APR Award Committee, Consultant, APR Scout Committee on 13th March 2010 at New Delhi & First Asian to get the Award. Mr. James Turlay, International Commissioner and Chairman & CEO, Ernst & Young World, Mr. Robert J. Mazzuca, Chief Scout Executive, BSA & Sri L.M. Jain, National Commissioner, BS&G are also seen.



i Kondajji B. Shanmukhappa, State Chief Commissioner i M.A. Khalid, State Secretary, Sri T.V. Narayana Shastri CC, Sri R.K. Siddaramanna, Hon'ble MLC i A.S. Padmanabha Bhat, Chairman, MADB i N.J. Rajasekhar, President, CMC, Smt. S.Y. Aruna Devi C(G) are seen at the Foundation Stone Laying Cermony of e Centenary Building of Shimoga Dist, BS&G held on 2nd March 2010 at Shimoga District Association Premises



Sri Kondajji B. Shanmukhappa, State Chief Commissioner, Sri M.A. Khalid, State Secretary, Sri Athani Kotrappa, President, Sri Murugharajendra J. Chigateri, DCC, Sri Mohammed Wasil, HQC, Sri M.M. Londe, DCC, Dharwad are seen at the Opening Ceremony of the New Kitchen Block & Guest House held on 21st March 2010 at DRM Scout Bhavan Premises, Davanagere.




ಶಿರಶಿಯಲ್ಲಿ ಇತ್ತೀಚೆಗೆ ಜರುಗಿದ ರಾಜ್ಯ ಮಟ್ಟದ ಪ್ರತಿಭಾ ಕಾರಂಜಿ ಕಾರ್ಯಕ್ರಮದಲ್ಲಿ ಸ್ವಯಂ ಸೇವಕರಾಗಿ ಸೇವೆಸಲ್ಲಿಸಿದ ಉತ್ತರಕನ್ನಡ ಜಿಲ್ಲೆಯ ಸ್ಕೌಟ್ ಶಿಕ್ಷಕರೊಂದಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಚಿದ್ರೆ ಶಂಕರಯ್ಯಸ್ವಾಮಿ, ಉಪನಿರ್ದೇಶಕರಾದ ಶ್ರೀ ಡಿ.ಕೆ. ಶಿವಕುಮಾರ್, ಶ್ರೀ ವೀರಣ್ಣ ತುರುಮುರಿ, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಜಿಲ್ಲಾ ಪಂಚಾಯತ್, ಕಾರವಾರ, ಶ್ರೀ ಸತೀಶ್ ಭಟ್, ಜಿಲ್ಲಾ ನಿರ್ದೇಶಕರು ಕ್ಯಾಂಪ್‌ಕೋ ಕಾರವಾರ ಮತ್ತು ಶ್ರೀ ಜಿ. ಕುಮಾರ್, ಉಪನಿರ್ದೇಶಕರು ಕಾರವಾರ ಇವರುಗಳನ್ನು ಕಾಣಬಹುದು.



ಶ್ರೀಮತಿ ಶಾಂತ ವಿ. ಆಚಾರ್ಯರವರು ರಾಜ್ಯ ಗೈಡ್ ಆಯುಕ್ತೆಯಾಗಿ ನೇಮಕಗೊಂಡ ಶುಭ ಸಂದರ್ಭದಲ್ಲಿ ಉಡುಪಿ ಜಿಲ್ಲಾವತಿಯಿಂದ ದಿನಾಂಕ 09-03-2010ರಂದು ಸನ್ಮಾನಿಸಲಾಯಿತು. ಜಿಲ್ಲಾ ಸಂಸ್ಥೆಯ ಪೋಷಕರಾದ ಶ್ರೀ ಪಿ. ರಬೀಂದ್ರನಾಯಕ್ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್, ಜಿಲ್ಲಾ ಆಯುಕ್ತರುಗಳಾದ ಶ್ರೀ ಎಡ್ವಿನ್ ಆಳ್ವ ಮತ್ತು ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ, ಪ್ರಾಂಶುಪಾಲರಾದ ಪ್ರೊ. ದಯಾನಂದ ಶೆಟ್ಟಿ ಮಾದವ್ ಪೈ ಮೆಮೋರಿಯಲ್ ಕಾಲೇಜ್, ಮಣಿಪಾಲ್ ಹಾಗು ಶ್ರೀ ಪ್ರಭಾಕರ್ ಭಟ್ ಇವರುಗಳನ್ನು ಚಿತ್ರದಲ್ಲಿ ಕಾಣಬಹುದು.



ದಿನಾಂಕ 22-03-2010ರಂದು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ನಡೆದ ಶತಮಾನೋತ್ಸವ ಭವನದ ಶಂಕುಸ್ಥಾಪನೆಯನ್ನು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ನೆರವೇರಿಸಿದರು. ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿ, ಜಿಲ್ಲಾ ಆಯುಕ್ತರುಗಳಾದ ಶ್ರೀಮತಿ ಎಸ್. ವೈ. ಅರುಣಾದೇವಿ, ಶ್ರೀ ಎ.ಎಸ್. ಚಂದ್ರಶೇಖರ್, ಜಿಲ್ಲಾ ಕಾರ್ಯದರ್ಶಿ, ಶ್ರೀ ಕೆ.ಪಿ. ಬಿಂದುಕುಮಾರ್, ಸಹ ಕಾರ್ಯದರ್ಶಿ ಶ್ರೀ ಹೆಚ್.ಡಿ. ಉದಯಶಂಕರ ಶಾಸ್ತ್ರಿ ಹಾಗು ಇತರರನ್ನು ಕಾಣಬಹುದು.



ದಿನಾಂಕ 21-03-2010ರಂದು ದಾವಣಗೆರೆ ಜಿಲ್ಲಾ ಆವರಣದಲ್ಲಿ ನಡೆದ ಸಮಾವೇಶದಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿ, ಬೆಳ್ಳಿ ನಾಣ್ಯವನ್ನು ಭಾರತದಲ್ಲಿ ಸ್ಕೌಟಿಂಗ್ ಶತಮಾನೋತವದ ಸವಿನೆನಪಿಗಾಗಿ ಬಿಡುಗಡೆ ಮಾಡಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಅಥಣಿ ಕೊಟ್ರಪ್ಪ, ಅಧ್ಯಕ್ಷರು, ಜಿಲ್ಲಾ ಸಂಸ್ಥೆ, ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಮಹಮದ್ ವಾಸಿಲ್, ಕೇಂದ್ರ ಸ್ಥಾನಿಕ ಆಯುಕ್ತರು, ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು, ಧಾರವಾಡ, ಶ್ರೀ ಎನ್. ಶ್ರೀನಿವಾಸನ್, ಜಂಟಿ ರಾಜ್ಯ ಕಾರ್ಯದರ್ಶಿ ಹಾಗು ಇತರರನ್ನು ಕಾಣಬಹುದು.



ಕರ್ನಾಟಕದಲ್ಲಿ ಮುಕ್ತದಳಗಳ ಪ್ರಾರಂಭಕ್ಕೆ ಕಾರಣರಾದ ದಿ॥ ಎಂ.ಹೆಚ್. ರಾಮಚಂದ್ರರಾವ್‌ರವರ ಬಗೆಗಿನ ಪುಸ್ತಕವನ್ನು ರಾಜ್ಯ ಕೇಂದ್ರ ಕಛೇರಿಯಲ್ಲಿ ಪ್ರೊ. ಎಂ. ಎಸ್. ಅಪ್ಪ, ಸಹಾಯಕ ರಾಜ್ಯ ಆಯುಕ್ತರು, ದಿನಾಂಕ 6 ಮಾರ್ಚಿ 2010ರಂದು ಬಿಡುಗಡೆ ಮಾಡಿದರು. ಶ್ರೀ ಕಾಶಿ ಶೇಷಾಚಲ ಶಾಸ್ತ್ರಿ ಛಾರಿಟಬಲ್ ಟ್ರಸ್ಟ್‌ನ ಅಧ್ಯಕ್ಷರಾದ ಶ್ರೀ ಸದಾನಂದ, ರಾಜ್ಯ ಸಂಸ್ಥೆಯ ಉಪಾಧ್ಯಕ್ಷಿಣಿಯಾದ ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಸ್ಕೌಟ್ ಆಯುಕ್ತರಾದ ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಎಂ.ಎ. ಖಾಲಿದ್, ಪುಸ್ತಕವನ್ನು ಬರೆದ ಶ್ರೀಮತಿ ನಂ. ನಾಗಲಕ್ಷ್ಮೀ ಶ್ರೀ ಕೆ. ಎಂ. ಸಂಶಿ, ಮುದ್ರಣ ನಿರ್ವಾಹಕರು ಇವರುಗಳನ್ನು ಚಿತ್ರದಲ್ಲಿ ಕಾಣಬಹುದು.




ಕೋಲಾರದಲ್ಲಿ ಇತ್ತೀಚೆಗೆ ನಡೆದ ವಿಭಾಗೀಯ ಮಟ್ಟದ ಕಾರ್ಯದರ್ಶಿಗಳ ಹಾಗೂ ಸಹಾಯಕ ಜಿಲ್ಲಾ ಆಯುಕ್ತರುಗಳ ಸಮಾವೇಶದಲ್ಲಿ ವಿಧಾನ ಪರಿಷತ್ ಸದಸ್ಯರಾದ ಶ್ರೀ ನಜೀರ್ ಅಹಮದ್ ರವರು ಮತನಾಡುತ್ತಿರುವುದು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ರಾಜ್ಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಎನ್. ಶ್ರೀನಿವಾಸನ್ ಹಾಗು ಇತರರನ್ನು ಕಾಣಬಹುದು.

# Editor's desk

"Scouting / Guiding Is partnership between young and old" The Youth want vibrant and thrilling activities to fulfil their all round development needs. Adults try to provide them the opportunity by creating value based activities in accordance with A PRO. This "Partnership" leads in preparing young people to face the challenges in life to become self reliant and good character citizens.

"Scouting / Guiding is partnership between Scout/Guide Community and society where we live"

The youth belong to society where they live and their activities provide direct or indirect service to the society through good turns and community oriented activities. This partnership helps young people to become responsible towards their role in society and get exposed to grass root realities. In turn society receives its due benefit of getting active responsible citizens out of young people and also in civic services rendered by youth.

"Scout/Guide Community builds partnership at local/ national and international levels with individuals, groups, governments and organizations"

The Scout Guide Community involves and integrates with many individuals and groups. It brings in community leaders, government officials, parents and heads of the local governance in to the fold of day to day activities which benefit the society in achieving the targeted priorities. This "Partnership" builds the image of Scouting/Guiding and creates PR in society. The result as all can see is "Worlds largest uniformed youth movement with the same fundamentals as laid down by our founder" and obviously we are known as "Messengers of peace".

Friends, "Partnership" is vital and pivoted for our organization and we as part of "Partnership" at every level should play active role in keeping the values of Scouting / Guiding to prevail in day today activities and happenings.

It also reminds me about the "World Scout Seminar on Partnership" held in Bangalore in 2005. We are the pioneers in the field and lets join hands and commit with society and Scout / Guide movement to keep lively work atmosphere with out any differences and bias.

M.A. KHALID
State Secretary

# ಮುಖ್ಯ ಆಯುಕ್ತರ ನುಡಿ....

ಮಾನ್ಯರೆ,

ವರ್ಷ ಮುಗಿಯುತ್ತದೆ. ಪರೀಕ್ಷೆಗಳು ಜರುಗುತ್ತಿವೆ. ಅಧ್ಯಾಪಕರು-ವಿದ್ಯಾರ್ಥಿಗಳು ತಮ್ಮಗಳ ಕರ್ತವ್ಯದಲ್ಲಿ ನಿರತರಾಗಿದ್ದಾರೆ. ಸರ್ವಶಿಕ್ಷಣ ಅಭಿಯಾನ ಮತ್ತು ಡಯಟ್ ಸಂಸ್ಥೆಗಳ ಮುಖೇನ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಮೂಲ ತರಬೇತಿ ಶಿಬಿರಗಳು ಯಶಸ್ವಿಯಾಗಿ ಜರುಗಿದ ಬಗ್ಗೆ ವರದಿಗಳು ಬಂದಿದೆ. ಸಾರ್ವಜನಿಕ ಶಿಕ್ಷಣ ಇಲಾಖೆಗೆ, ಸರ್ವಶಿಕ್ಷಣ ಅಭಿಯಾನದ ಸಮಸ್ತರಿಗೆ, ಡಯಟ್ ಸಂಸ್ಥೆಗಳ ಮುಖ್ಯಸ್ಥರಿಗೆ, ಸ್ಥಳೀಯ-ಜಿಲ್ಲಾ ಸಂಸ್ಥೆಗಳ ನನ್ನ ಎಲ್ಲಾ ಸಹೋದ್ಯೋಗಿಗಳಿಗೆ, ತರಬೇತಿ ಶಿಬಿರಗಳ ನಾಯಕರಾಗಿ-ಸಹನಾಯಕರುಗಳಾಗಿ, ಸಹಾಯಕರುಗಳಾಗಿ ಮಾರ್ಗದರ್ಶನ ಮಾಡಿ - ಚಳವಳಿಯ ಸದಾಶಯ-ಚಿಂತನೆಗಳನ್ನು ತರಬೇತಿ ಪಡೆದ ಸಹಸ್ರಾರು ಶಿಕ್ಷಕ-ಶಿಕ್ಷಕಿಯರಿಗೆ ಮನದಟ್ಟುಮಾಡಿ ಸ್ಕೌಟ್-ಗೈಡ್ ಕಬ್-ಬುಲ್ ಬುಲ್ ಘಟಕಗಳನ್ನು ತಮ್ಮ ಶಾಲೆಗಳಲ್ಲಿ ಪ್ರಾರಂಭಿಸಲು ಪ್ರೇರೇಪಿಸಿದ ಎಲ್ಲಾ ತರಬೇತುದಾರರಿಗೆ, ರಾಜ್ಯ ಸಂಸ್ಥೆ ಪರವಾಗಿ ನನ್ನ ಹೃತ್ಪೂರ್ವಕ ಅಭಿನಂದನೆ ಮತ್ತು ನಮನಗಳು.

ವಿಶ್ವ ಗೈಡ್ ಶತಮಾನೋತ್ಸವ ಪ್ರಾರಂಭ-10 ಏಪ್ರಿಲ್ 2010. ರಾಜ್ಯ ಸಂಸ್ಥೆ ಏರ್ಪಡಿಸಿರುವ ಶತಮಾನೋತ್ಸವ ಕಾರ್ಯಕ್ರಮವನ್ನು ಘನತೆವೆತ್ತ ರಾಜ್ಯಪಾಲರಾದ ಶ್ರೀ ಹೆಚ್. ಆರ್. ಭಾರದ್ವಾಜ್ ಉದ್ಘಾಟಿಸುವರು. ಸನ್ಮಾನ್ಯ ಸಚಿವರುಗಳಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್ ಮತ್ತು ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ಗೌರವಾನ್ವಿತ ಅತಿಥಿಗಳಾಗಿ ಭಾಗವಹಿಸುವರು. ದಳ ಘಟಕ, ಸ್ಥಳೀಯ-ಜಿಲ್ಲೆ-ರಾಜ್ಯಮಟ್ಟದಲ್ಲಿ ಗರ್ಲ್ ಗೈಡ್ಸ್‌ಗಳಿಗೆ 100 ವರ್ಷಗಳ ಕಾಲ ದಾರಿ ದೀಪವಾಗಿ ಮುನ್ನಡೆಸಿದ ಮಹಾನ್ ಚಳವಳಿ ಸ್ಕೌಟ್-ಗೈಡ್ ಚಳವಳಿ. ಆದುದರಿಂದ ವಿಶ್ವದಾದ್ಯಂತ ಗರ್ಲ್‌ಗೈಡ್ಸ್‌ಗಳು ಹೇಳುತ್ತಾರೆ, ಬದಲಾಗುತ್ತಿರುವ ಜೀವನದ ನೂರುವರ್ಷಗಳು. ಇದು ನಿಜಕ್ಕೂ ನಾವೆಲ್ಲಾ ಹೆಮ್ಮೆ-ಅಭಿಮಾನಪಡುವ ವಿಚಾರ.

2010, 2011 ಮತ್ತು 2012 ಮೂರು ವರ್ಷ ವಿಶ್ವದಲ್ಲೆಡೆ ಗೈಡ್ ಶತಮಾನೋತ್ಸವ ಕಾರ್ಯಕ್ರಮಗಳನ್ನು ಆಚರಿಸುವ ಬಗ್ಗೆ ವಿಶ್ವ ಗೈಡ್ ಸಂಸ್ಥೆ ಹಲವಾರು ಸಲಹೆ ಸೂಚನೆಗಳನ್ನು ನೀಡಿದ್ದು- ಅವರ ಮಾರ್ಗಸೂಚಿಯಂತೆ ರಾಜ್ಯ ಸಂಸ್ಥೆ ಈಗಾಗಲೇ ಸುತ್ತೋಲೆ ನೀಡಿದ್ದೇವೆ. ಚಳವಳಿಯ ತತ್ವ-ನೀತಿ-ನಿರೂಪಣೆ-ಆದರ್ಶ-ವಿಚಾರಗಳನ್ನು ಯುವಜನಾಂಗಕ್ಕೆ ಹಾಗೂ ಪೋಷಕರು-ಸಮಾಜಕ್ಕೆ, ಭಿತ್ತಿಪತ್ರಗಳ-ಕರಪತ್ರಗಳ-ಬುಕ್ ಮಾರ್ಕ್‌ಗಳ ಪಥಚಲನದ ಮೂಲಕ ಚಳವಳಿಯನ್ನು ಸಮಾಜಮುಖಿ ಮಾಡುವಲ್ಲಿ ಸೂಕ್ತ ಕಾರ್ಯಕ್ರಮಗಳನ್ನು ನಮ್ಮಗಳ ಹಂತದಲ್ಲಿ ಏರ್ಪಡಿಸಲು ಕೋರುತ್ತೇನೆ.

ರಾಷ್ಟ್ರೀಯ ಸಂಸ್ಥೆಯವರು ದಿನಾಂಕ 19-03-2010 ರಂದು ನವದೆಹಲಿಯ ರಾಷ್ಟ್ರೀಯ ಕಾರ್ಯಾಲಯದಲ್ಲಿ ಏರ್ಪಡಿಸಿದ್ದ "ರಾಷ್ಟ್ರೀಯ ಯೋಜನಾ ಸಮಿತಿಯ" ಸಭೆಯಲ್ಲಿ ಭಾಗವಹಿಸಿದೆ. ರಾಷ್ಟ್ರದೆಲ್ಲೆಡೆ ರಾಷ್ಟ್ರೀಯ ಸಂಸ್ಥೆಯವರು 2010-11ರಲ್ಲಿ ಆಯೋಜಿಸಿರುವ ವಿವಿದ ಶಿಬಿರಗಳು - ತರಬೇತಿಗಳು- ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳು, ಸಾಹಸ ಶಿಬಿರಗಳು ಅಕ್ಟೋಬರ್-ನವೆಂಬರ್ 2010 ರಲ್ಲಿ ಹೈದರಾಬಾದಿನಲ್ಲಿ ಜರುಗಲಿರುವ ರಾಷ್ಟ್ರೀಯ ಜಾಂಬೋರಿ, ರಾಷ್ಟ್ರೀಯ ಸಂಸ್ಥೆಯ ವಿವಿದ ವಿಭಾಗಗಳಲ್ಲಿ ಮುಂದಿನ ವರ್ಷದಲ್ಲಿ ಏರ್ಪಡಿಸುವ ಶಿಬಿರಗಳ ಬಗ್ಗೆ ಚರ್ಚಿಸಲಾಯಿತು.

ದಿನಾಂಕ 21 ಮಾರ್ಚ್ 2010 ರಂದು ದಾವಣಗೆರೆ ಜಿಲ್ಲಾ ಸಂಸ್ಥೆ ಏರ್ಪಡಿಸಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಶತಮಾನೋತ್ಸವ ಕಟ್ಟಡದ ಉದ್ಘಾಟನೆ-ಶತಮಾನೋತ್ಸವದ ಸವಿನೆನಪಿಗಾಗಿ ಬಿಡುಗಡೆಗೊಳಿಸಿದ ಬೆಳ್ಳಿನಾಣ್ಯ ಕಾರ್ಯಕ್ರಮದಲ್ಲಿ ನಾನು, ರಾಜ್ಯ ಕಾರ್ಯದರ್ಶಿ ಶ್ರೀ ಎಂ.ಎ. ಖಾಲಿದ್, ಜಂಟಿ ರಾಜ್ಯ ಕಾರ್ಯದರ್ಶಿ, ಶ್ರೀ ಎನ್. ಶ್ರೀನಿವಾಸನ್, ಸ್ಥಾನಿಕ ಆಯುಕ್ತ ಶ್ರೀ ಮಹಮದ್ ವಾಸಿಲ್, ಸ್ಥಾನಿಕ ಆಯುಕ್ತ ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರು ಧಾರವಾಡ ಹೆಮ್ಮೆಯಿಂದ ಭಾಗವಹಿಸಿ, ಜಿಲ್ಲಾ ಸಂಸ್ಥೆಗೆ ಹಾಗೂ ಸ್ಕೌಟರ್ಸ್, ಗೈಡರ್ಸ್‌ಗಳಿಗೆ ಶುಭ ಹಾರೈಸಿದ್ದೇವೆ. ಮೇಲ್ಕಂಡ ಸಮಾರಂಭದಲ್ಲಿ ರಾಜ್ಯ ಸ್ಥಾನಿಕ ಆಯುಕ್ತರೂ-ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರೂ, ರಾಜ್ಯದ ಹಿರಿಯ ತರಬೇತಿ ನಾಯಕರೂ ಆದ ಶ್ರೀ ಮಹಮದ್ ವಾಸಿಲ್ ಅವರನ್ನು ಹಾಗೂ ನಮ್ಮ ರಾಜ್ಯ ಕಾರ್ಯದರ್ಶಿಗಳೂ, ಏಷಿಯಾ ಫೆಸಿಫಿಕ್ ವಿಭಾಗದ ಉಪಾಧ್ಯಕ್ಷರೂ- ಪ್ರಶಸ್ತಿ ಸಮಿತಿ ಅಧ್ಯಕ್ಷರಾದ ಶ್ರೀ ಎಂ.ಎ. ಖಾಲಿದ್ ಅವರಿಗೆ ಬಾಯ್ ಸ್ಕೌಟ್ಸ್ ಆಫ್ ಅಮೆರಿಕಾ ಸಂಸ್ಥೆ" ಇತ್ತೀಚೆಗೆ ನವದೆಹಲಿ ಗಡಪುರಿಯಲ್ಲಿ ನೀಡಿದ "ವಿಶ್ವ ಸಿಲ್ವರ್ ಪ್ರಶಸ್ತಿ" ಮನ್ನಣೆಗಾಗಿ ಶಾಲು-ಸ್ಮರಣಿಕೆಗಳೊಂದಿಗೆ ಜಿಲ್ಲಾ ಸಂಸ್ಥೆ ಗೌರವಿಸಿದರು. ಭಾರತದಲ್ಲಿಯೇ ಪ್ರಥಮವಾಗಿ ಶತಮಾನೋತ್ಸವ ನೆನಪಿನ ಬೆಳ್ಳಿ ನಾಣ್ಯ ಬಿಡುಗಡೆಗೊಳಿಸಿ ಎಲ್ಲಾ ದಳನಾಯಕ-ನಾಯಕಿಯರುಗಳಿಗೆ ಸ್ಮರಣಿಕೆಯಾಗಿ ನೀಡಿದ ಹೆಗ್ಗಳಿಕೆ ದಾವಣಗೆರೆ ಜಿಲ್ಲಾ ಸಂಸ್ಥೆಗೆ ಸೇರುತ್ತದೆ. ಪ್ರತ್ಯೇಕ ವಿವರವಾದ ವರದಿ ಪ್ರಕಟಗೊಂಡಿದೆ.

ದಿನಾಂಕ : 22 ಮಾರ್ಚ್ 2010ರಂದು ಶಿವಮೊಗ್ಗ ಜಿಲ್ಲಾ ಸಂಸ್ಥೆ ಏರ್ಪಡಿಸಿದ ಶತಮಾನೋತ್ಸವದ ಸವಿನೆನಪಿನ "ಸ್ಕೌಟ್-ಗೈಡ್ ಭವನದ" ಶಂಕುಸ್ಥಾಪನಾ ಸಮಾರಂಭದಲ್ಲಿ ನಾನು, ರಾಜ್ಯ ಕಾರ್ಯದರ್ಶಿ ಶ್ರೀ ಎಂ.ಎ. ಖಾಲಿದ್, ಸ್ಥಾನಿಯ ಆಯುಕ್ತ ಶ್ರೀ ಎಂ.ಎ. ಚೆಲ್ಲಯ್ಯ ಹೆಮ್ಮೆಯಿಂದ ಭಾಗವಹಿಸಿ ರಾಜ್ಯದ ಅತ್ಯಂತ ಹಿರಿಯ ಜಿಲ್ಲೆಯ ಹಾಗೂ ರಾಜ್ಯದ ಪ್ರಥಮ ಸ್ಕೌಟ್ ಆಯುಕ್ತರಾದ ಜಸ್ಟೀಸ್ ಕೆ. ಶಂಕರನಾರಾಯಣರಾವ್ ಅವರು 1920ರಲ್ಲೇ ಜಿಲ್ಲಾ ಸ್ಕೌಟ್ ಆಯುಕ್ತರಾಗಿ ಸೇವೆ ಸಲ್ಲಿಸಿದ ಜಿಲ್ಲೆಗೆ ಹೃತ್ಪೂರ್ವಕ ಅಭಿನಂದನೆ ಸಲ್ಲಿಸಿದ್ದೇವೆ. 60 ಲಕ್ಷರೂ ಅಂದಾಜು ವೆಚ್ಚದ ಶತಮಾನೋತ್ಸವ ಸ್ಕೌಟ್-ಗೈಡ್ ಭವನ ನಿರ್ಮಾಣ-ಜಿಲ್ಲಾ ಸಂಸ್ಥೆಯ ಇತಿಹಾಸದಲ್ಲಿ ಹಾಗು ಸ್ಕೌಟ್-ಗೈಡ್ ಚಳವಳಿ ಶತಮಾನೋತ್ಸವ ಶುಭ ಸಂದರ್ಭದಲ್ಲಿ ಮುಕುಟಪ್ರಾಯವಾಗಲೆಂದು ಆಶಿಸುತ್ತೇನೆ. ಪ್ರತ್ಯೇಕ ವಿವರವಾದ ವರದಿ ಪ್ರಕಟಗೊಂಡಿದೆ.

ನಮ್ಮ ಸಂಸ್ಥೆಯ ರಾಜ್ಯ ಕಾರ್ಯದರ್ಶಿಗಳೂ - ಏಷಿಯಾ ಪೆಸಿಫಿಕ್ ವಿಭಾಗದಲ್ಲಿ ಹಲವಾರು ವರ್ಷಗಳಿಂದ ವಿವಿದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿರುವ ಶ್ರೀ ಎಂ.ಎ.ಖಾಲಿದ್ ಅವರಿಗೆ "ಅಮೆರಿಕ ಬಾಯ್ ಸ್ಕೌಟ್ಸ್ ಸಂಸ್ಥೆ" ನೀಡುವ ಅತ್ಯುನ್ನತ ಪ್ರಶಸ್ತಿ "ವಿಶ್ವ ಸಿಲ್ವರ್ ಪ್ರಶಸ್ತಿಯನ್ನು" ಈ ತಿಂಗಳ 13 ರಂದು ನೀಡಿ ಗೌರವಿಸಿರುವುದು ನಾವೆಲ್ಲ ಹೆಮ್ಮೆ ಪಡುವ ವಿಷಯ. ಈ ಪ್ರಶಸ್ತಿಯನ್ನು ಏಷಿಯಾ ಪೆಸಿಫಿಕ್ ವಿಭಾಗದಲ್ಲಿ ಪಡೆದವರಲ್ಲಿ ಶ್ರೀ ಖಾಲಿದ್ ಮೊದಲಿಗರಾಗಿದ್ದಾರೆ. ರಾಜ್ಯದ ಎಲ್ಲಾ ಸ್ಕೌಟ್ಸ್-ಗೈಡ್ಸ್, ಘಟಕ-ದಳಗಳ ನಾಯಕರುಗಳು, ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಗಳ ಎಲ್ಲಾ ಪದಾಧಿಕಾರಿಗಳ ಪರವಾಗಿ, ರಾಜ್ಯ ಸಂಸ್ಥೆಯ ಪದಾಧಿಕಾರಿಗಳ-ಸಹೋದ್ಯೋಗಿಗಳ ಪರವಾಗಿ ಶ್ರೀ ಖಾಲಿದ್ ಅವರಿಗೆ ಹೃತ್ಪೂರ್ವಕ ಅಭಿನಂದನೆ ಸಲ್ಲಿಸುತ್ತೇನೆ.

ರಾಜ್ಯ ಗೈಡ್ಸ್ ಆಯುಕ್ತರಾಗಿ ನೇಮಕಗೊಂಡನಂತರ ರಾಜ್ಯ ಗೈಡ್ ಕಾರ್ಯಾಲಯ, ರಾಜ್ಯ ಕೇಂದ್ರ ಕಾರ್ಯಾಲಯ, ರಾಜ್ಯ ತರಬೇತಿಕೇಂದ್ರ ಡಾ. ಅನಿಬೆಸೆಂಟ್ ಪಾರ್ಕ್ ದೊಡ್ಡಬಳ್ಳಾಪುರಕ್ಕೆ ದಿನಾಂಕ: 23 ಮತ್ತು 24 ರಂದು ಶ್ರೀಮತಿ ಶಾಂತ ವಿ. ಆಚಾರ್ಯ ಅವರು ವಿದ್ಯುಕ್ತವಾಗಿ ಭೇಟಿನೀಡಿ - ರಾಜ್ಯ ಸಂಸ್ಥೆ ಪದಾಧಿಕಾರಿಗಳನ್ನು, ಚಳವಳಿಯ ಕಾರ್ಯಕರ್ತರನ್ನು ಹಾಗೂ ಸಂಸ್ಥೆಯ ನೌಕರ ವರ್ಗದವರನ್ನು ವೈಯಕ್ತಿಕ ಪರಿಚಯಿಸಿಕೊಂಡು ಆತ್ಮೀಯವಾಗಿ ನೀಡಿದ ಸ್ವಾಗತಕ್ಕೆ ಸೂಕ್ತವಾಗಿ ಸ್ಪಂದಿಸಿ-ತಮಗೆ ವಹಿಸಿರುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸಲು ಎಲ್ಲರ ಸಹಾಯ ಸಹಕಾರವನ್ನು ಕೋರಿದರು. ತಮ್ಮ ಸಾಮಾಜಿಕ - ಸಾರ್ವಜನಿಕ, ಕೌಟುಂಬಿಕ ಅನುಭವಗಳ ಹಿನ್ನೆಲೆಯಲ್ಲಿ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಗೆ ಶ್ರಮಿಸುವುದಾಗಿ ತಿಳಿಸಿದರು.

ಸ್ಕೌಟ್-ಗೈಡ್ ಚಳವಳಿ ರಾಜ್ಯದಲ್ಲಿ ಬೆಳೆಸುವಲ್ಲಿ ನಾವುಗಳೆಲ್ಲಾ ಇನ್ನೂ ಹೆಚ್ಚು ಕ್ರಿಯಾಶೀಲರಾಗಬೇಕೆಂಬುದು ನನ್ನ ಅಭಿಲಾಷೆ. ನಮ್ಮಗಳೆಲ್ಲರ ಪ್ರಾಮಾಣಿಕ ಪ್ರಯತ್ನ ಫಲಪ್ರದವಾಗಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ.

- ಮಹಾತ್ಮಾ ಗಾಂಧಿ

ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ ಮತ್ತು ಗೈಡ್ ಚಳವಳಿಗೆ ಕಳುಹಿಸುತ್ತಿದ್ದೆ.

- ಡಾ. ಅನಿ ಬೆಸೆಂಟ್

ರಾಜ್ಯ ವಾರ್ತೆ

# Centenary Celebrations of World Guide Movement




The Inaugural Function of the Centenary Celebrations of World Guide Movement will be held on 10th April 2010 at Glass House, Rajbhavan, Bangalore,

Sri Hansraj R. Bharadwaj, His Excellency the Governor of Karnataka and Patron, The Bharat Scouts and Guides, Karnataka has graciously consented to Inaugurate the celebrations.

Sri Vishweshwar Hegde Kageri, Hon'ble Minister for Primary & Secondary Education. Govt. of karnataka and Sri Gulihatti D. Shekar, Hon'ble Minister for Textiles Youth Services & Sports Govt. of Karnataka have kindly consented to be the Guests of Honour.

---



**SMT. SHANTHA V. ACHARYA** is appointed as **State Commissioner (Guides),** The Bharat Scouts & Guides Karnataka. She took charge as State Commissioner (Guides) on 23-3-2010 at the Girl Guide Office, Shanthi Gruha, Palace Road, Bangalore. She visited the State Training Centre, Dr. Annie Besant Park and the State Headquraters on 24-3- 2010 and met the office bearers and other volunteers.

Smt. Shantha V. Acharya is a well known but humble Social Worker of Udupi. She has been consistently taking keen interest in Organising Women in many Social and Cultural Activities in Udupi District . She is the Founder Member of Mahila Morcha of BJP and Mathru Mandali of Vishwa Hindu Parishad, Udupi. She was Muncipal Councilor & President of Works Committee of Udupi Town Municipal Council in early nineties. During this period, she was not only instrumental in Developmental Activities, but also helped lot of poor Widows and the Elderly.

She worked as District Commissioner (Guides) of Bharat Scouts and Guides, Udupi District Association for Three Years during the Year 1999 to 2001. Worked as Taluka Vice President of Udupi Taluk Scouts and Guides Association for 25 years. Presently, She is the Vice-president of Udupi District Association, Founder President of Kunjibettu Consumers Co-Op. Society, Udupi, President of Silver Jubilee Celebration Committee, Govt PU College for Women, Udupi.

Smt. Shantha V. Acharya is a Science graduate (B.Sc.) and is happily married to Dr. V.S. Acharya. Hon'ble Home Minister of Karnataka. She has five children of which Two are Doctors and Three are Engineers and all of them are President Scouts and Guides.

# ಮುಕ್ತದಳಗಳ ನಾಯಕರುಗಳ ರಾಜ್ಯ ಮಟ್ಟದ ಸಮಾವೇಶ

ದಿನಾಂಕ: 6-3-2010 ರಂದು ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ಮುಕ್ತದಳ ನಾಯಕರುಗಳ ರಾಜ್ಯ ಮಟ್ಟದ ಸಮಾವೇಶವನ್ನು ನಡೆಸಲಾಯಿತು. ಈ ಸಮಾವೇಶದಲ್ಲಿ 49 ಜನ ಭಾಗವಹಿಸಿದ್ದರು.

ಸಮಾವೇಶದ ನಾಯಕರಾಗಿ ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ. (ಸ್ಕೌಟ್), ರಾಜ್ಯ ಜಂಟಿ ಕಾರ್ಯದರ್ಶಿಗಳು ಕಾರ್ಯನಿರ್ವಹಿಸಿದರು. ಸಹಾಯಕರಾಗಿ. ಶ್ರೀ ನಾರಾಯಣಶೆಟ್ಟಿ, ಎಲ್.ಟಿ.(ಸ್ಕೌಟ್), ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಜಾನಕಿ, ಎಲ್.ಟಿ.(ಗೈಡ್) ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್) ಶ್ರೀ ಟಿ.ಎ. ಮಂಜುನಾಥಾಚಾರ್ ಎಲ್.ಟಿ. (ಸ್ಕೌಟ್) ಶ್ರೀ ಎ.ಎಂ. ಶಂಕರ್, ಎಲ್.ಟಿ.(ರೋ) ಶ್ರೀಮತಿ ಹೊನ್ನಮ್ಮ, ಎ.ಎಲ್.ಟಿ.(ಗೈ) ಕಾರ್ಯನಿರ್ವಹಿಸಿದರು.

ಈ ಸಮಾವೇಶದಲ್ಲಿ 2009-10ನೇ ಸಾಲಿನ ದಳಗಳ ಚಟುವಟಿಕೆಗಳ ಪರಿಶೀಲನೆ- ಮಾಡಲಾಯಿತು ಹಾಗೂ ಅನಂತರ ಈ ಕೆಳಕಂಡ ವಿಷಯಗಳ ಬಗ್ಗೆ ಮಾಹಿತಿ ನೀಡಲಾಯಿತು. 1. ಪ್ರಧಾನ ಮಂತ್ರಿಗಳ ಪಾರಿತೋಷಕ ಹಾಗೂ ಉಪರಾಷ್ಟ್ರಪತಿ ಪಾರಿತೋಷಕ, 2. ಮುಕ್ತದಳಗಳ ಗುಣಾತ್ಮಕ ಮತ್ತು ಸಂಖ್ಯಾತ್ಮಕ ಸುಧಾರಣೆ, 3. ಸಮುದಾಯ ಅಭಿವೃದ್ಧಿಯಲ್ಲಿ ಮುಕ್ತದಳಗಳ ಪಾತ್ರ (ಗುಂಪುಚರ್ಚೆ), 4. ಗುಂಪು ವ್ಯವಸ್ಥೆ, 5. ನೆರೆಯ ದಳಗಳಿಗೆ ಮುಕ್ತದಳಗಳ ಸಹಕಾರ, 6. ಮುಕ್ತದಳಗಳ ಸಂಖ್ಯೆಯನ್ನು ಹೇಗೆ ಹೆಚ್ಚಿಸಬಹುದು?, 7. ಪೋಷಕರ ಪಾಲ್ಗೊಳ್ಳುವಿಕೆ - ಘಟಕ ನಾಯಕರಾಗಿ, ಪದಕ ಪರೀಕ್ಷಕರಾಗಿ, ಪದಕ ಬೋಧಕರಾಗಿ ನಂತರ ನಡೆಸಿ ಮುಕ್ತ ಅಧಿವೇಶನದಲ್ಲಿ ಈಕೆಳಕಂಡ ಸಲಹೆಗಳನ್ನು ನಾಯಕರುಗಳು ನೀಡಿದರು.,

1) ಮುಕ್ತದಳಗಳಿಗೆ ನೀಡುವ ಶ್ರಮದಾನದ ಮೊತ್ತ ಹೆಚ್ಚಿಸಬೇಕು.

2) ಮುಕ್ತದಳಗಳಿಗಾಗಿಯೇ ಪ್ರತ್ಯೇಕ ಶಿಬಿರಗಳನ್ನು ನಡೆಸಬೇಕು.

ಶ್ರೀ ಟಿ.ಎಸ್. ಲೂಕಾಸ್ ಎಲ್.ಟಿ.(ಸ್ಕೌಟ್) ರಾಜ್ಯ ಆಯುಕ್ತರು (ಸ್ಕೌಟ್ಸ್) ರವರು ಮುಕ್ತದಳ ನಾಯಕರುಗಳಿಗೆ ಪ್ರಮಾಣ ಪತ್ರ ವಿತರಿಸಿ ಶುಭಕೋರಿದರು. ಶ್ರೀ ಎನ್. ಶ್ರೀನಿವಾಸ್, ಎಲ್.ಟಿ.(ಸ್ಕೌಟ್) ರಾಜ್ಯ ಜಂಟಿ ಕಾರ್ಯದರ್ಶಿಗಳು ಧ್ವಜ ಅವರೋಹಣದೊಂದಿಗೆ ಸಮಾವೇಶವನ್ನು ಮುಕ್ತಾಯಗೊಳಿಸಿದರು.

# "ಎಂ-ಎಚ್. ರಾಮಚಂದ್ರರಾವ್" ಪುಸ್ತಕ ಬಿಡುಗಡೆ

ದಿನಾಂಕ: 6-3-2010 ರಂದು ಸಂಜೆ, ದಿ|| ಎಂ.ಎಚ್. ರಾಮಚಂದ್ರರಾವ್ ರವರ ಬಗ್ಗೆ ಶ್ರೀಮತಿ ನಾಗಲಕ್ಷ್ಮಿಯವರು ಪುಸ್ತಕವನ್ನು ಪ್ರೊ. ಎಂ.ಎಸ್. ಅಪ್ಪ, ಸಹಾಯ ರಾಜ್ಯ ಆಯುಕ್ತರು ಬಿಡುಗಡೆ ಮಾಡಿದರು. ಮುಕ್ತದಳಗಳ ಪ್ರವರ್ತಕರಾಗಿದ್ದ ದಿ|| ಎಂ.ಎಚ್. ರಾಮಚಂದ್ರರಾಯರ ಬಗೆಗಿನ ಪುಸ್ತಕವು, ಮುಕ್ತದಳ ನಾಯಕರುಗಳ ಸಮಾವೇಶದಲ್ಲಿ ಬಿಡುಗಡೆಯಾಗಿದ್ದು ಅತ್ಯಂತ ಯುಕ್ತವಾಗಿತ್ತು. ಕಾಶೀಶೇಷಾಚಲಶಾಸ್ತ್ರಿ ಟ್ರಸ್ಟಿನ ಅಧ್ಯಕ್ಷರಾದ ಶ್ರೀ ಸದಾನಂದ ರಾಜ್ಯ ಸ್ಕೌಟ್ ಆಯುಕ್ತರಾದ ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಎಂ.ಎ. ಖಾಲಿದ್, ರಾಜ್ಯ ಸಂಸ್ಥೆಯ ಉಪಾಧ್ಯಕ್ಷಿಣಿಯಾದ ಶ್ರೀಮತಿ ಎಂ.ಜಿ. ಬೋಪಯ್ಯ ಶ್ರೀ ಎಂ.ಎಚ್. ಆರ್. ರವರ ಕುಟುಂಬದ ಸದಸ್ಯರು ಸ್ನೇಹಿತರು, ಹಿತೈಷಿಗಳು, ರಾಜ್ಯಸಂಸ್ಥೆಯ ಪದಾಧಿಕಾರಿಗಳು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

**ಜೀವನದ ನಾಲ್ಕು ದೃಷ್ಟಿ ಕೋನಗಳು**

ಹಿಂದೆ ನೋಡಿರಿ - ದೇವರನ್ನು ವಂದಿಸಿರಿ

ಮುಂದೆ ನೋಡಿರಿ - ದೇವರನ್ನು ನಂಬಿರಿ

ಸುತ್ತಲೂ ನೋಡಿರಿ - ದೇವರ ಸೇವೆ ಮಾಡಿರಿ

ಅಂತರ್ಯದಲ್ಲಿ ನೋಡಿರಿ - ದೇವರನ್ನು ಕಾಣಿರಿ

ಜಿಲ್ಲಾ ವಾರ್ತೆ ದಾವಣಗೆರೆ

# New Kitchen Block and Guest House Inaugurated & Scout Centenary Memento "Silver Coin" was released on the Occasion

Sri Kondajji B. Shanmukhappa, State Chief Commissioner, Inaugurated the New Kitchen Block and Guest House constructed at a cost of Six Lakhs by the District Association at D.R.M. Scout Bhavan Premises Davanagere to commemorate the Centenary year of Scouting in India, on 21-3-2010 Sri M.A. Khalid, State Secretary, released the "Silver Coin" to commemorate the Centenary year of Scouting in India. Sri Murugharajendra J. Chigateri, District Chief Commissioner, presented the SILVER COIN to all the Unit Leaders and a "Abhinandana Patra" to all the Institutions in the District who are running Cub/Bulbul/Scout/Guide Units.

Sri Athani Kotrappa, President, Davanagere District Assoication presided. He appreciated the services rendered by the Scouters and Guiders. Sri M.A Khalid, State Secretary and Sri Mohammed Wasil, Headquarters Commissioner (Scout) were felicitated by the Davangere Dist. Association on the occasion.

Sri Athani Kotrappa, President and Sri Murugharajendra J. Chigateri, D.C.C., were felicitated by Nethaji Open Scout Troop and Chetana Open Guide Company.

Earlier Scouters and Guiders conference was held nearly 300 Unit leaders participated in the event. Sri Mohamed Wasil, Headquarters Commissioner (S) Inaugurated the conference. Sri N. Srinivasan Joint State Secretary Sri M.A.Chellaiah, Headquarters Commissioner (Publication) and Sri M.M. Londe. Dist. Chief Commissioner, Dharward, were te Resource persons. Sri A.P. Shadaksharappa, District Commissioner (Scouts) welcomed, Smt. Puttamma Maharudraiah, District Commissioner (Guides) presented a Report of the District.

Sri Shankar Nayak, District Secretary proposed the vote of thanks. Sri Badami Rudresh, Dist. Treasurer, Sri A Shivappa, Smt. S. Siddamma, Dist. Training Commissiners, Smt. C. Manjula, ASOC and Smt. R Sukhavani, Joint Secretary other Office Bearers, District Headquarters Commissioners and Assistant District Commissioner were present the occasion.





ದಿನಾಂಕ 7-2-2010 ರಂದು ನಡೆದ ಪಲ್ಸ್ ಪೋಲಿಯೋ ರಾಷ್ಟ್ರೀಯ ಕಾರ್ಯ ಕ್ರಮದಲ್ಲಿ ಭಾಗವಹಿಸಿದ ಶ್ಯಾಗಲೆಯ ಶ್ರೀ ಮಲ್ಲಿಕಾರ್ಜುನಸ್ವಾಮಿ ಗ್ರಾಮಾಂತರ ಪ್ರೌಢಶಾಲೆಯ ಸ್ಕೌಟ್-ಗೈಡ್‌ಗಳು ಗ್ರಾಮದಲ್ಲಿ ಪ್ರಭಾತ್ ಪೇರಿ ನಡೆಸಿದರು ಹಾಗೂ ಮನೆ ಮನೆಗೆ ಹೋಗಿ 5 ವರ್ಷದೊಳಗಿನ ಮಕ್ಕಳನ್ನು ಪೋಲಿಯೋ ಕೇಂದ್ರಕ್ಕೆ ಕರೆದುಕೊಂಡು ಬರುವುದೊಂದಿಗೆ ರಾಷ್ಟ್ರೀಯ ಕಾರ್ಯ ಕ್ರಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಭಾರತ್ ಸ್ಕೌಟ್ಸ್ - ಗೈಡ್ಸ್ ಜಿಲ್ಲಾ ಸಂಸ್ಥೆ ದಾವಣಗೆರೆ ವತಿಯಿಂದ ದಿನಾಂಕ 22-2-2010 ರಂದು ಧ.ರಾ.ಮ. ಸ್ಕೌಟ್ ಭವನದಲ್ಲಿ ಸಂಸ್ಥಾಪಕರ ದಿನಾಚರಣೆಯನ್ನು ಅತ್ಯಂತ ಅದ್ದೂರಿಯಾಗಿ ನೆರವೇರಿಸಲಾಯಿತು.

ಬೆಳಗ್ಗೆ 8 ಗಂಟೆಗೆ ನಗರದ ಪ್ರಮುಖ ಬೀದಿಗಳಲ್ಲಿ ಪಥಚಲನೆ ನಡೆಸಲಾಯಿತು. ನಂತರ ಕಬ್ಸ್, ಬುಲ್ ಬುಲ್ಸ್, ಸ್ಕೌಟ್ಸ್ - ಗೈಡ್ಸ್‌ಗಳಿಗೆ ಬೇಡನ್ ಪಾವೆಲ್ಲರ ಬಗ್ಗೆ ಭಾಷಣ ಸ್ಪರ್ಧೆ ಏರ್ಪಡಿಸಲಾಗಿತ್ತು. ಪ್ರಶಸ್ತಿ ಪಡೆದ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್ - ಗೈಡ್ಸ್‌ಗಳಿಗೆ ಶ್ರೀ ಬೆಳ್ಳಿ ಶೆಟ್ಟಿ ಉಪನಿರ್ದೇಶಕರು ಸಾ.ಶಿ.ಇ. ಇವರು ಪ್ರಶಸ್ತಿ ವಿತರಿಸಿದರು. ಶ್ರೀ ಮುರುಘರಾಜೇಂದ್ರ, ಜಿ. ಚಿಗಟೇರಿ ಜಿಲ್ಲಾ ಮುಖ್ಯ ಆಯುಕ್ತರು. ಎ.ಪಿ. ಷಡಾಕ್ಷರಪ್ಪ, ಪುಟ್ಟಮ್ಮ ಮಹಾರುದ್ರಯ್ಯ, ಎಸ್. ಶಂಕರನಾಯ್ಕ, ಎ. ಶಿವಪ್ಪ, ಸಿದ್ಧಮ್ಮ, ವಿಶ್ವನಾಥ ಬೂಸ್ನೂರು ಕಾಂತಿಲಾಲ, ಪಿ. ಜೆ. ಪೂಲಚಂದ, ಇನ್ನೂ ಮುಂತಾದವರು ಉಪಸ್ಥಿತರಿದ್ದರು.

ದಿನಾಂಕ 4-3-2010 ರಿಂದ 5-3-2010 ರ ವರೆಗೆ ಹರಿಹರ ತಾಲ್ಲುಕ ಸಂಸ್ಥೆಯ ಆಶ್ರಯದಲ್ಲಿ ಸ್ಥಾಪಕರ ದಿನಾಚರಣೆ ಹಾಗೂ ತಾಲ್ಲೂಕ ಮೇಳವನ್ನು ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ಶಾಲಾ ಆವರಣದಲ್ಲಿ ಹರಿಹರದಲ್ಲಿ ಏರ್ಪಡಿಸಲಾಗಿತ್ತು. ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಬಿ. ಜಯದೇವಪ್ಪನವರು, ವೃಕ್ತ ನಿರೀಕ್ಷಕರಾದ ಶ್ರೀ ನಾಗೇಸ್ ಐತಾಳ್, ಬಿ.ಆರ್.ಪಿ. ಅಂಗಡಿ ರೇವಣಸಿದ್ಧಪ್ಪ, ಸಿ.ಆರ್.ಪಿ. ಗದಿಗಪ್ಪ, ಸಹಾಯಕ ಜಿಲ್ಲಾ ಆಯುಕ್ತರುಗಳಾದ ಶ್ರೀ ಹೆಚ್. ಹಾಲಪ್ಪ, ಶ್ರೀಮತಿ ಗೀತ, ಡಿ.ಪಿ. ಮುಂತಾದವರು ಭಾಗವಹಿಸಿದ್ದರು. 400 ಸ್ಕೌಟ್ಸ್ - ಗೈಡ್ಸ್‌ಗಳು ಈ ಸಮಾರಂಭದಲ್ಲಿ ಭಾಗವಹಿಸಿದ್ದರು.

# ಶಿವಮೊಗ್ಗ

## ನೂತನ ಕಟ್ಟಡದ ಶಂಕುಸ್ಥಾಪನೆ

ದಿನಾಂಕ : 22-3-2010 ರಂದು ಬೆಳಗ್ಗೆ 9.30ಕ್ಕೆ ಜಿಲ್ಲಾ ಸ್ಕೌಟ್ ಭವನದ ಆವರಣದಲ್ಲಿ ನೂತನ ಕಟ್ಟಡದ ಶಂಕುಸ್ಥಾಪನಾ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು, ರಾಜ್ಯ ಮುಖ್ಯ ಆಯುಕ್ತರು ನೂತನ ಕಟ್ಟಡದ ಶಂಕುಸ್ಥಾಪನೆಯನ್ನು ನೆರವೇರಿಸಿದರು. ಶ್ರೀ ಟಿ.ವಿ. ನಾರಾಯಣ ಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ಇದರ ನೇತೃತ್ವ ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿ, ಶ್ರೀ ಆರ್.ಕೆ. ಸಿದ್ದರಾಮಣ್ಣ, ವಿಧಾನ ಪರಿಷತ್ ಸದಸ್ಯರು, ಶ್ರೀ ಎನ್.ಜೆ. ರಾಜಶೇಖರ್, ಅಧ್ಯಕ್ಷರು, ನಗರಸಭೆ, ಶಿವಮೊಗ್ಗ, ಶ್ರೀ ಎ.ಎಸ್. ಪದ್ಮನಾಭ ಭಟ್ಟ, ಅಧ್ಯಕ್ಷರು ಎಂ.ಎ.ಡಿ.ಬಿ. ಶಿವಮೊಗ್ಗ, ಶ್ರಿ ಅಯನೂರು ಶಿವಾನಂದಪ್ಪ, ಅಧ್ಯಕ್ಷರು, ಎ.ಪಿ.ಎಂ.ಸಿ. ಶಿವಮೊಗ್ಗ, ಶ್ರೀ ಎಂ. ಎ. ಚಲ್ಲಯ್ಯ, ಕೇಂದ್ರ ಸ್ಥಾನಿಕ ಆಯುಕ್ತರು, ಜಿಲ್ಲಾ ಆಯುಕ್ತರುಗಳಾದ ಶ್ರೀ ಎ.ಎಸ್. ಚಂದ್ರಶೇಖರ್, ಶ್ರೀಮತಿ ಎಸ್.ವೈ. ಅರುಣಾದೇವಿ, ಶ್ರೀ ಹೆಚ್.ಡಿ. ಉದಯ ಶಂಕರಶಾಸ್ತ್ರಿ ಹಾಗು ಇತರ ಪಧಾದಿಕಾರಿಗಳು ಭಾಗವಹಿಸಿದ್ದರು.

ಅನಂತರ ನಡೆದ ಕಾರ್ಯಕ್ರಮದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಮಾತನಾಡುತ್ತಾ ಜಿಲ್ಲಾ ಸಂಸ್ಥೆಯು ಒಳ್ಳೆಯ ಕೆಲಸವನ್ನು ಮಾಡುತ್ತಿದ್ದು ಇನ್ನೂ ಉತ್ತಮ ಕೆಲಸ ಕಾರ್ಯಗಳನ್ನು ಮಾಡಲೆಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಮಾತನಾಡಿದ ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿಯವರು 22 ವರ್ಷದ ಹಿಂದೆ ತಾವು ಶಿವಮೊಗ್ಗ ಜಿಲ್ಲೆಯಲ್ಲಿ ವಿಶೇಷ ಜಿಲ್ಲಾಧಿಕಾರಿಗಳಾಗಿ ಸೇವೆ ಸಲ್ಲಿಸುವಾಗ ದಕ್ಷಿಣ ಪ್ರಾಂತೀಯ ಜಾಂಬೋರೇಟ್ ಮಾಡಿದ ಸವಿನೆನಪನ್ನು ನೆನಪಿಸಿಕೊಂಡರು ಶ್ರೀ ಪದ್ಮನಾಭ ಭಟ್ಟ, ಅಧ್ಯಕ್ಷರು ಮಲೆನಾಡು ಪ್ರದೇಶ ಅಭಿವೃದ್ಧಿ ನಿಗಮ, ಶಿವಮೊಗ್ಗ ಇವರು ಮಾತನಾಡುತ್ತಾ ತಾವೂ ಸಹ ಬಾಲ್ಯದಲ್ಲಿ ಸ್ಕೌಟ್ ಆಗಿದ್ದನ್ನು ಸ್ಮರಿಸಿಕೊಂಡು ಈ ಕಟ್ಟಡಕ್ಕೆ ನಮ್ಮ ಸಂಸ್ಥೆಯಿಂದ 2 ಲಕ್ಷ ರೂ. ಗಳನ್ನು ನೀಡುವುದಾಗಿ ಭರವಸೆ ನೀಡಿದರು. ಶ್ರೀಮತಿ. ಎಸ್.ವೈ. ಅರುಣಾದೇವಿ, ಜಿಲ್ಲಾ ಆಯುಕ್ತರು, ಗೈಡ್ಸ್, ಇವರು ಶಾಲೆಗಳಲ್ಲಿನ ಬಡ ವಿದ್ಯಾರ್ಥಿಗಳಿಗೆ ಸಮವಸ್ತ್ರವನ್ನು ಹೊಲಿಸಿಕೊಡುವುದಾಗಿ ತಿಳಿಸಿದರು ಮತ್ತು ಹೆಚ್ಚಿನ ಮಟ್ಟದಲ್ಲಿ ಮಕ್ಕಳು ಸ್ಕೌಟ್-ಗೈಡ್ ಸಂಸ್ಥೆಗೆ ಸೇರುವಂತೆ ಮನವಿ ಮಾಡಿದರು. ಶ್ರೀ ಸಿದ್ಧರಾಮಣ್ಣ, ವಿಧಾನ ಪರಿಷತ್ ಸದಸ್ಯರು ಮಾತನಾಡುತ್ತಾ ತಮ್ಮ ತಾತ, ತಾವು ಮತ್ತು ತಮ್ಮ ಮಗನು ಸ್ಕೌಟ್ ಆಗಿದ್ದನ್ನೂ ನೆನಪಿಸಿಕೊಂಡರು ಈ ಕಟ್ಟಡ ಅಭಿವೃದ್ಧಿ ಹಾಗೂ ಸಂಸ್ಥೆಯ ಚಟುವಟಿಕೆಗೆ ತಮ್ಮ ಜೊತೆ ಸೇರಿ ಅಭಿವೃದ್ಧಿ ಮಾಡಲು ತಾವು ಸದಾ ಸಿದ್ಧವಾಗಿರುವುದಾಗಿ ಹೇಳಿದರು.

ಶ್ರೀ ಎನ್. ಜಿ. ರಾಜಶೇಖರ್, ಅಧ್ಯಕ್ಷರು, ನಗರಸಭೆ ಇವರು ಸಹ ಸಮವಸ್ತ್ರ ಹಾಗೂ ಇತರೆ ಸಹಾಯ ಮಾಡುವುದಾಗಿ ತಿಳಿಸಿದರು. ಶ್ರೀ ಆಯನೂರು ಶಿವಾನಂದಪ್ಪ, ಅಧ್ಯಕ್ಷರು, ಎ.ಪಿ.ಎಂ.ಸಿ. ಇವರು ಸಹ ಸಹಾಯ ಮಾಡುವುದಾಗಿ ತಿಳಿಸಿದರು. ಶ್ರೀ ಟಿ.ವಿ. ನಾರಾಯಣ ಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ಮಾತನಾಡುತ್ತಾ ಈ ಕಟ್ಟಡವನ್ನು ಬೇಗ ಮುಗಿಸಲು ಎಲ್ಲರೂ ಸಹಾಯ ಸಹಕಾರ ನೀಡಲು ವಿನಂತಿಸಿದರು.

ಪ್ರಾರಂಭದಲ್ಲಿ ಪ್ರೊ. ಎ.ಎಸ್. ಚಂದ್ರಶೇಖರ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ರವರು ಪ್ರಾಸ್ತಾವಿಕ ನುಡಿಯನ್ನು ತಿಳಿಸಿದರು. ಶ್ರೀ ಕೆ.ಪಿ ಬಿಂದುಕುಮಾರ್, ಜಿಲ್ಲಾ ಕಾರ್ಯದರ್ಶಿ ಸರ್ವರನ್ನು ಸ್ವಾಗತಿಸಿದರು. ಶ್ರೀ ಗಣಪತಿ, ಕೇಂದ್ರ ಸ್ಥಾನಿಕ ಆಯುಕ್ತರು(ಸ್ಕೌಟ್ಸ್) ಎಲ್ಲರನ್ನು ವಂದಿಸಿದರು. ಶ್ರೀ ಎಂ.ಜಿ. ಶಿವಕುಮಾರ್, ಜಿಲ್ಲಾ ತರಬೇತಿ ಆಯುಕ್ತರು ಶ್ರೀ ಬಿ.ಎಂ. ಜಯಾಚಾರ್, ಜಿಲ್ಲಾ ಸಂಘಟನಾ ಆಯುಕ್ತರು(ಸ್ಕೌಟ್ಸ್) ಶ್ರೀ ವೈ.ಆರ್. ವೀರೇಶಪ್ಪ ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ ಶಿವಮೊಗ್ಗ ಇವರು ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ಸಂಘಟಿಸಿದ್ದರು.

## ಉತ್ತರ ಕನ್ನಡ

### ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಕಾರ್ಯಾಗಾರ

**ಕುಮಟಾ** : ದಿನಾಂಕ: 5-2-2010 ಶುಕ್ರವಾರದಂದು ಮಾನ್ಯ ಅಧ್ಯಕ್ಷರು. ಜಿ.ಪಂ. ಉತ್ತರಕನ್ನಡ ಆಗಿರುವ ಶ್ರೀ ಎಲ್.ವಿ. ಶಾನಭಾಗರಿಂದ ಸ್ಕೌಟರ್ಸ್/ಗೈಡರ್ಸ್ ಕಾರ್ಯಾಗಾರ ಉದ್ಘಾಟಿಸಲ್ಪಟ್ಟಿತು. ಕಾರ್ಯಕ್ರಮದಲ್ಲಿ ಜಿ.ಪಂ. ಸದಸ್ಯರು ಹಾಗೂ ಕೃಷಿ ಮತ್ತು ಕೈಗಾರಿಕಾ ಅಧ್ಯಕ್ಷರಾದ ಶ್ರೀ ಹೊನ್ನಪ್ಪ ನಾಯಕ, ತಾ.ಪಂ. ಅಧ್ಯಕ್ಷರಾದ ಶ್ರೀಮತಿ ಮಾಲತಿ ಹೆಗಡೆ, ಸದಸ್ಯರಾದ ಶ್ರೀಮತಿ ನಾಗವೇಣಿ ಮುಕ್ತಿ, ಶ್ರೀ ಆನಂದ ಅಡಿಗ ಹಾಗೂ ಶ್ರೀಮತಿ ಲಲಿತಾ ಹೆಗಡೆ ಉಪಸ್ಥಿತರಿದ್ದರು. ತಾಲೂಕಾ ಘಟಕದ ಅಧ್ಯಕ್ಷರಾದ ಶ್ರಿ ಅತುಲ ವಿ. ಕಾಮತರು ಸ್ವಾಗತಿಸಿದರು. ಡಾ. ಜಿ.ಜಿ. ಹೆಗಡೆಯವರಿಂದ 'ಆರೋಗ್ಯವೇ ಭಾಗ್ಯ' ಎಂಬ ವಿಷಯದ ಕುರಿತು ಉಪನ್ಯಾಸ ನಡೆಯಿತು. ಕುಮಾರಿ ದೀಪಿಕಾ ರವರಿಂದ "ಆರ್ಟ್ ಆಫ್ ಲಿವಿಂಗ್" ಕುರಿತು ವಿಚಾರ ವಿನಿಮಯ ನಡೆಯಿತು. ರಾತ್ರಿ 'ಭವ್ಯ ಶಿಬಿರಾಗ್ನಿ" ನಡೆಸಲಾಯಿತು. 06-02-2010 ರಂದು ಮುಂಜಾನೆ ಪಿ.ಎಸ್.ಆಯ್, ಶ್ರೀ ಮಂಜುನಾಥ ನಾಯಕರಿಂದ ಸ್ಕೌಟ್ ಪಥಚಲನದ ಉದ್ಘಾಟನೆ ನಡೆಯಿತು. ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ ಪುರಸಭೆಯ ಉಪಾಧ್ಯಕ್ಷರಾದ ಶ್ರೀ ಯೋಗಾನಂದ ಗಾಂಧಿ ಉಪಸ್ಥಿತರಿದ್ದರು. ಶ್ರೀಮತಿ ಮೀರಾ ಶ್ಯಾನಭಾಗ, ಶ್ರೀ ಎಚ್.ಎನ್. ನಾಯ್ಕ, ಶ್ರೀ ಶಿವರಾಯ ನಾಯಕ ಮಾತನಾಡಿದರು. ಶ್ರೀ ಎಲ್. ವಿ. ಶ್ಯಾನಭಾಗ, ಶ್ರೀ ಎಂ.ಆರ್. ಹೆಗಡೆ, ಶ್ರೀ ಆರ್. ವಿ. ಗಾವಡಿ, ಶ್ರೀಎಸ್. ಜೆ. ನಾಯ್ಕ, ಶ್ರೀ ಎಸ್. ಎಸ್. ಭಟ್ಟರನ್ನು ಸನ್ಮಾನಿಸಲಾಯಿತು.

ದಿನಾಂಕ 22-2-2010 ಸೋಮವಾರ ಜನತಾ ವಿದ್ಯಾಲಯ ಧಾರೇಶ್ವರದಲ್ಲಿ ಲಾರ್ಡ್ ಬೇಡನ್ ಪೋವೆಲ್ಲರ ದಿನಾಚರಣೆಯನ್ನು ಆಚರಿಸಲಾಯಿತು. ಈ ಸಭೆಯ ಅಧ್ಯಕ್ಷತೆಯನ್ನು ಶಾಲಾ ಮುಖ್ಯಾಧ್ಯಾಪಕರಾದ ಶ್ರೀಮತಿ ಲಕ್ಷ್ಮೀ ಕಾಸ್ಮಾಡಿಯವರು ವಹಿಸಿ, ಹುತಾತ್ಮರ ಬಗ್ಗೆ ತಿಳಿಸಿದರು. ವೇದಿಕೆಯಲ್ಲಿ ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರಾದ ಶ್ರೀ ಆನಂದು ಶಾನಭಾಗರು, ಸ್ಕೌಟ್ಸ್, ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ವಿ. ನಾಯ್ಕರು, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಡಿ. ಫರ್ನಾಂಡೀಸ್‌ರು ಉಪಸ್ಥಿತರಿದ್ದರು.





ಜಿಲ್ಲಾಮಟ್ಟದ ತೃತೀಯ ಸೋಪಾನ ಪರೀಕ್ಷೆಯನ್ನು ಇತ್ತೀಚೆಗೆ ಆವೆ ಮರಿಯಾ ಪ್ರಾಥಮಿಕ ಶಾಲೆಯ ಸಭಾಂಗಣದಲ್ಲಿ ಏರ್ಪಡಿಸಲಾಗಿತ್ತು. ಈ ಪರೀಕ್ಷೆಯಲ್ಲಿ ಜಿಲ್ಲೆಯ ವಿವಿಧೆಡೆಯಿಂದ ಬಂದ 160 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪಾಲ್ಗೊಂಡಿದ್ದರು. ತಾ. ಪಂ. ಉಪಾಧ್ಯಕ್ಷೆ ರೇವತಿ ವಡ್ಡರ್ ಪರೀಕ್ಷಾ ಸಂದರ್ಭದಲ್ಲಿ ಭೇಟಿ ನೀಡಿ ಸ್ಕೌಟ್ಸ್ ಮತ್ತು ಗೈಡ್ಸ್ ನಿಂದಾಗುವ ಲಾಭ ಹಾಗೂ ದೇಶಪ್ರೇಮ ಶಿಸ್ತಿನ ವಿಷಯದ ಬಗ್ಗೆ ತಿಳಿಸಿದರು. ಈ ಸಂದರ್ಭದಲ್ಲಿ ಶಿರಸಿಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯದರ್ಶಿ ವಿನಾಯಕ ಭಟ್ಕಳ ಉಪಸ್ಥಿತರಿದ್ದರು.

ದಿನಾಂಕ 15-2-2010 ರಿಂದ 21-02-2010 ರವರೆಗೆ ಉತ್ತರ ಕನ್ನಡ ಜಿಲ್ಲೆಯ ಶಿಕ್ಷಕ /ಶಿಕ್ಷಕಿಯರಿಗೆ ಮೂಲ ಹಾಗೂ ಮುಂದುವರೆದ ತರಬೇತಿಯನ್ನು ಜಿಲ್ಲಾ ಸಂಸ್ಥೆ ಹಾಗೂ ಸರ್ವ ಶಿಕ್ಷಣ ಅಭಿಯಾನದ ಸಂಯುಕ್ತಾಶ್ರಯದಲ್ಲಿ ಕೆ.ಡಿ.ಸಿ. ಹಿರಿಯ ಪ್ರಾಥಮಿಕ ಶಾಲೆ ತಾಲೂಕ, ಹೊನ್ನಾವರದಲ್ಲಿ ನಡೆಸಲಾಯಿತು. ಜಿಲ್ಲೆಯಿಂದ ಮೂಲ ತರಬೇತಿಗೆ ಒಟ್ಟು 37 ಹಾಗೂ ಮುಂದುವರೆದ ತರಬೇತಿ ಒಟ್ಟು 43 ಶಿಕ್ಷಕ ಶಿಕ್ಷಕಿಯರು ಪಾಲ್ಗೊಂಡು ತರಬೇತಿಯ ಶಿಕ್ಷಣ ಪಡೆದರು. ಹಾಗೆಯೇ ಶಿಬಿರ ನಾಯಕರಾಗಿ ಶ್ರೀ ನೆ. ಸುಬ್ರಹ್ಮಣ್ಯನ್, ಎ.ಎಲ್.ಟಿ. (ಸ್ಕೌ) ಶ್ರೀ. ಬಿ.ಡಿ. ಫರ್ನಾಂಡೀಸ್, ಎಲ್.ಟಿ. (ಸ್ಕೌ). ಸಿಸ್ಟರ್ ಸಿಂಧಿಯಾ ಹಾಗೂ ಶ್ರೀಮತಿ ಕೆ.ಕೆ. ಲೀಲಾ ರಾಜ್ಯ ತರಬೇತಿ ಆಯುಕ್ತೆ (ಗೈಡ್) ರವರು ಶಿಬಿರವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. ಡಿ.ಓ.ಸಿ. ಶ್ರೀ ಎಸ್. ಪವನ್ ಲೋಪಿಸ್ ಸಂಘಟಿಸಿದ್ದರು. ಹಾಗೆಯೇ ಕೆ.ಪಿ.ಸಿ.ಯ ಅಧೀಕ್ಷಕ ಅಭಿಯಂತರರು (ವಿದ್ಯುತ್) ಇವರು ಉದ್ಘಾಟನಾ ಸಮಾರಂಭದಲ್ಲಿ ಹಾಜರಿದ್ದರು.

## ಗುಲ್ಬರ್ಗಾ

ಚಿತ್ತಾಪೂರ ತಾಲೂಕಿನ ಸ್ಕೌಟರ್, ಗೈಡರ್ ಸಮಾವೇಶವನ್ನು ಬಿ.ಆರ್.ಸಿ. ಯಲ್ಲಿ ದಿನಾಂಕ 20-2-10 ರಂದು ಏರ್ಪಡಿಸಲಾಗಿತ್ತು. ಈ ಸಮಾವೇಶಕ್ಕೆ ಮುಖ್ಯ ಅತಿಥಿಗಳಾಗಿ ಬಿ.ಆರ್.ಸಿ. ಚಿತ್ತಾಪೂರ, ಶ್ರೀ ಗುರಣ್ಣಾ - ಗುಂಡಗುರ್ತಿ. ಶ್ರೀ ಶಂಕರ - ಮೊದಲೆ, ಮಾಜಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಮುಖ್ಯ ಗುರುಗಳು ಸರಕಾರಿ ಕನ್ಯಾ ಪ್ರೌಢಶಾಲೆ ಚಿತ್ತಾಪೂರ, ಶ್ರೀ ಅಯ್ಯಪ್ಪ ಜಿಲ್ಲಾ ದೈಹಿಕ ಶಿಕ್ಷಕರ ಸಂಘದ ಅಧ್ಯಕ್ಷರು. ಗುಲ್ಬರ್ಗಾ ಜಿಲ್ಲೆ, ಶ್ರೀ ಗುರುಲಿಂಗಯ್ಯ, ಶ್ರೀ ವಿಜಯಕುಮಾರ್ ಜೋಶಿ, ಜಿಲ್ಲಾ ಸಹಾಯಕ ಆಯುಕ್ತರು (ಸ್ಕೌ) ಶ್ರೀ ಹಣಮಂತಪ್ಪ ಭಾಗವಹಿಸಿದ್ದರು. ಶ್ರೀ ವೀರಭದ್ರಯ್ಯ, ಡಿ.ಓ.ಸಿ. ಯವರು ಸ್ವಾಗತಕೋರಿದರೆ, ಶ್ರೀ ಜಯಪ್ರಕಾಶ ಕಟ್ಟಿಮನಿ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಸ್ಯಾಮುಯೆಲ್ ಆಯ್ ವಂದನಾರ್ಪಣೆ ಮಾಡಿದರು.

22-2-2010 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಕಚೇರಿಯ ಆವರಣದಲ್ಲಿ ಏರ್ಪಡಿಸಲಾದ ವಿಶ್ವ ಸ್ಕೌಟಿಂಗ್/ ಚಿಂತನಾ ದಿನಾಚರಣೆಯ ಕಾರ್ಯಕ್ರಮವನ್ನು ಶ್ರೀಮತಿ ಕಮಲಾದೇವಿ, ಚಿಕ್ಕಮಠ ಇವನ ನೇತೃತ್ವದಲ್ಲಿ ನೆರವೇರಿಸಲಾಯ್ತು. ಮುಖ್ಯ ಅತಿಥಿಗಳಾಗಿ ಶ್ರೀ ವೀರಭದ್ರ ಸಿಂಪಿ. ಅಧ್ಯಕ್ಷರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಗುಲ್ಬರ್ಗಾ. ಶ್ರೀ ಎಚ್.ಸಿ. ಪಾಟೀಲ ಪ್ರಾಚಾರ್ಯರು ಸರಕಾರಿ ಪದವಿ ಪೂರ್ವಮಹಾವಿದ್ಯಾಲಯ ಗುಲ್ಬರ್ಗಾ ಶ್ರೀ ಎಸ್.ಪಿ. ಸುಳ್ಯದ್, ಜಿಲ್ಲಾ ಆಯುಕ್ತರು (ಸ್ಕೌ), ಶ್ರೀಮತಿ ಶರಣಮ್ಮಾ -ನಿಯೋಗಿ, ಜಿಲ್ಲಾ ಆಯುಕ್ತರು (ಗೈ) ಶ್ರೀಮತಿ. ಸುಜಾತಾ ಈ. ಮುಲ್ಲಾ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು (ಗೈ) ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ಡಾ॥ ಶೀಲಾ-ಸಿದ್ಧರಾಮ, ರಾಜ್ಯ ಸಹಾಯಕ ಆಯುಕ್ತರು (ಗೈ) ಗುಲ್ಬರ್ಗಾ ವಿಭಾಗ ಇವರು ವಹಿಸಿದ್ದರು. 185 ಸ್ಕೌಟ್ಸ್, 10 ಸ್ಕೌಟರ್, 100 ಗೈಡ್ಸ್ 8 ಗೈಡರ್ಸ್ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಕೊಡಗು

ಇಂದಿನ ಮಕ್ಕಳು ದೇಶದ ಭವಿಷ್ಯದ ಆಸ್ತಿಯಾಗಿರುವುದರಿಂದ ಸೇವಾ ಮನೋಭಾವನೆ ಮೈಗೂಡಿಸಿಕೊಂಡು ಮುನ್ನಡೆಯುವಂತೆ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಧಾನ ಆಯುಕ್ತ ಕೆ.ಟಿ. ಬೇಬಿ ಮ್ಯಾಥ್ಯೂ ಕರೆ ನೀಡಿದರು. ನಗರದ ಜಿಲ್ಲಾ ಕ್ರೀಡಾಂಗಣದಲ್ಲಿನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಭಾಭವನದಲ್ಲಿ ಜರುಗಿದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪನಾ ದಿನಾಚರಣೆಯಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಪರಿಸರ ಅಧಿಕಾರಿ ಪ್ರಕಾಶ್ ಮಾತನಾಡಿ, ಪರಿಸರ, ಸಂರಕ್ಷಣೆ ಮತ್ತು ಜಲಸಂರಕ್ಷಣೆಯು ದೇಶದ ಅವಿಭಾಜ್ಯ ಅಂಗಗಳಾಗಿದ್ದು, ನೀರನ್ನು ಮಿತವಾಗಿ ಬಳಸಬೇಕಲ್ಲದೆ, ಪ್ಲಾಸ್ಟಿಕ್




ನಿರ್ಮೂಲನೆ ಬಗ್ಗೆ ಗಮನ ಹರಿಸಬೇಕು ಎಂದರು. ಗಾಂಧಿ ಮೈದಾನದಿಂದ ಆರಂಭವಾದ ಜಾಥಾವನ್ನು ಮಡಿಕೇರಿ ನಗರ ಪೊಲೀಸ್ ಠಾಣಾಧಿಕಾರಿ ದುರ್ಗಾ ಉದ್ಘಾಟಿಸಿದರು. ನಗರಸಭಾ ಅಧ್ಯಕ್ಷ ಪಿ.ಡಿ. ಪೊನ್ನಪ್ಪ, ಪೌರಾಯುಕ್ತ ಶ್ರೀಕಾಂತ್ ರಾವ್ ಇದ್ದರು. ಸಂತಮೈಕಲರ ಶಾಲೆಯ ಶಿಕ್ಷಕಿ ಮಾರ್ಗರೇಟ್ ನೇತೃತ್ವದಲ್ಲಿ ಸರ್ವಧರ್ಮ ಪ್ರಾರ್ಥನೆ ಜರುಗಿತು. ವಿವಿಧ ವಿಭಾಗಗಳಲ್ಲಿ ಸಾಧನೆ ಮಾಡಿದ ವಿದ್ಯಾರ್ಥಿಗಳಿಗೆ ಜಿಲ್ಲಾ ಪುರಸ್ಕಾರ ನೀಡಲಾಯಿತು. ಜಿಲ್ಲಾ ಕ್ರೀಡಾಂಗಣದ ವ್ಯಾಪ್ತಿಯಲ್ಲಿ ಪ್ಲಾಸ್ಟಿಕ್ ಮತ್ತು ಕಸ ತೆಗೆಯುವ ಶ್ರಮದಾನ ಕಾರ್ಯಕ್ರಮವನ್ನು ಈ ಸಂದರ್ಭದಲ್ಲಿ ನಡೆಸಲಾಯಿತು. ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರು, ಸ್ಕೌಟ್ಸ್ ಆಯುಕ್ತ ಶ್ರೀ ಪಿ.ಎ. ಅಯ್ಯಣ್ಣ, ಗೈಡ್ಸ್ ಆಯುಕ್ತ ಶ್ರೀಮತಿ ಡಾ.ಟಿ. ಕಾವೇರಪ್ಪ, ತರಬೇತಿ ಆಯುಕ್ತ ಶ್ರೀ ಜಮ್ಮಿ ಸಿಕ್ವೇರಾ, ಕಾರ್ಯದರ್ಶಿ ಶ್ರೀಮತಿ ದಮಯಂತಿ ಮತ್ತಿತರರು ಹಾಜರಿದ್ದರು.

ಸ್ಕೌಟ್ ಚಳವಳಿಯ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೋವೆಲ್ ಮತ್ತು ಲೇಡಿ ಬೇಡನ್ ಪೋವೆಲ್‌ರ ಜನ್ಮ ದಿನದ ಹಿನ್ನೆಲೆಯಲ್ಲಿ ಕುಶಾಲನಗರ ಸರಕಾರಿ ಬಾಲಕಿಯರ ಪ್ರೌಢಶಾಲೆಯ ಗೈಡ್ಸ್‌ಗಳು ಕುಶಾಲನಗರ ಸರಕಾರಿ ಆಸ್ಪತ್ರೆಯ ಒಳರೋಗಿಗಳಿಗೆ ಹಣ್ಣು ಹಂಪಲು ಹಂಚುವ ಕಾರ್ಯಕ್ರಮ ಹಮ್ಮಿಕೊಂಡಿದ್ದರು.

## ಗದಗ

ದಿನಾಂಕ 26-2-2010 ರಂದು ಜಿಲ್ಲಾಧಿಕಾರಿಗಳ ಸಭಾಭವನದಲ್ಲಿ ಸ್ಕೌಟ್-ಗೈಡ್ ಮಕ್ಕಳಿಗೆ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಸಮಾರಂಭದಲ್ಲಿ ಅಡಿಶನಲ್ ಜಿಲ್ಲಾಧಿಕಾರಿಗಳಾದ ಶ್ರೀ ಪಿ.ಟಿ. ರುದ್ರಗೌಡರವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಎನ್. ಖಾಜಿ, ಉಪನಿರ್ದೇಶಕರು ಹಾಗು ಜಿಲ್ಲಾ ಪ್ರಧಾನ ಆಯುಕ್ತರು ಶ್ರೀ ಡಿ.ವ್ಹಿ ಬೆಲ್ಲದ ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀಮತಿ ಸುಮಾ ಗರಗ, ಶ್ರೀಮತಿ ನಾಗರತ್ನ ಮುಳಗುಂದ ಉಪಾಧ್ಯಕ್ಷರು ಉಪಸ್ಥಿತರಿದ್ದರು.

ಶ್ರೀ ಡಿ.ವ್ಹಿ. ಬೆಲ್ಲದವರು ಸ್ಕೌಟ್-ಗೈಡ್ ಜಿಲ್ಲಾ ಸಂಸ್ಥೆಗೆ ಪೂಜ್ಯ ಮುಂಡರಗಿ ಅನ್ನದಾನ ಸ್ವಾಮಿಜಿಯವರ 18 ಗುಂಟೆ ನಿವೇಶನ ಕೊಟ್ಟಿದ್ದಾರೆ. ಮಾನ್ಯ ಜಿಲ್ಲಾಧಿಕಾರಿಗಳು ಅದರ ಅಭಿವೃದ್ಧಿಗಾಗಿ ಶೌಚಾಲಯ, ಕುಡಿಯುವ ನೀರಿನ ವ್ಯವಸ್ಥೆಗೆ ಸಹಾಯ ನೀಡಬೇಕೆಂದು ಮನವಿ ಮಾಡಿದರು. ಶ್ರೀ ಪಿ.ಟಿ.ರುದ್ರಗೌಡ ಇವರು 350 ಸ್ಕೌಟ್-ಗೈಡ್‌ಗಳು ಇಂದು ಸಮವಸ್ತ್ರದಲ್ಲಿ ಜಿಲ್ಲಾ ಆಡಳಿತ ಭವನದಲ್ಲಿ ಸೇರಿದ್ದು ಭವನಕ್ಕೆ ಶೋಭೆ ತಂದಿದೆ. ಸಂಸ್ಥೆಯ ಬೇಡಿಕೆ ಪೂರ್ಣಗೊಳಿಸಲು. ನಮ್ಮ ಕಾರ್ಯಾಲಯದಿಂದ ಪೂರ್ಣ ಸಹಾಯ ಸಹಕಾರ ನೀಡಲಾಗುವುದೆಂದು ತಿಳಿಸಿದರು

### ವಿಶ್ವಸ್ಕೌಟ್ ದಿನ ಹಾಗೂ ಚಿಂತನಾ ದಿನಾಚರಣೆ



ಸ.ಹಿ.ಪ್ರಾ. ಶಾಲೆ ಮಾಡಳ್ಳಿಯಲ್ಲಿ ಚಿಂತನಾ ದಿನಾಚರಣೆಯನ್ನು ಶ್ರೀ ಜಿ.ಎ. ನರಗುಂದ ಇವರ ನೇತೃತ್ವದಲ್ಲಿ ಆಚರಿಸಲಾಯಿತು. ಶ್ರೀ ಜಿ.ಎ. ನರಗುಂದ ಅವರು ತಮಗೆ ಅಕ್ಷರಜ್ಞಾನ ದಾನ ಮಾಡಿದ ನಿವೃತ್ತ ಪ್ರಾಥಮಿಕ ಶಾಲಾ ಶಿಕ್ಷಕ ದಂಪತಿಗಳಾದ ಶ್ರೀ ಮತ್ತು ಶ್ರೀಮತಿ ಜೆ.ಡಿ. ಶಿಂದಗಿಯವರನ್ನು ಸನ್ಮಾನಿಸಿದರು. ಇದೇ ಸಂದರ್ಭದಲ್ಲಿ ಸದರಿ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ದೀಕ್ಷಾ ಸಮಾರಂಭ ನೆರವೇರಿಸ ಲಾಯಿತು. ಈ ಸಮಾರಂಭದಲ್ಲಿ ಪ್ರಧಾನ ಗುರುಗಳಾದ ಶ್ರೀ ಕೆ.ಟಿ. ಪಾಟೀಲ, ಶ್ರೀ ಬಸವರಾಜ

ಪ್ರ.ಗು.ಪ್ರೌಢಶಾಲೆ, ಅಧ್ಯಕ್ಷರು, ಎಸ್.ಡಿ.ಎಂ.ಸಿ. ಶ್ರೀ ಎಂ.ಎಸ್. ಹಿರೇಮಠ, ಗದಗ ಜಿಲ್ಲಾ ಸಂಸ್ಥೆಯ ಕೋಶಾಧ್ಯಕ್ಷರು ಶ್ರೀ ಬಿ.ಎ. ವಸ್ತ್ರದ, ಡಿ.ಓ.ಸಿ. ಗದಗ ಉಪಸ್ಥಿತರಿದ್ದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಗದಗ ಇವರು ಸಿ.ಡಿ.ಓ. ಜೈನ್ ಶಾಖೆಯ ಸಂಯೋಗದಿಂದ ಚಿಂತನಾ ದಿನಾಚರಣೆಯನ್ನು ಜೈನ ಪ್ರೌಢಶಾಲೆಯ ಅಧ್ಯಕ್ಷರಾದ ಡಾ. ಪಿ.ಎಸ್. ಖೋನಾ ಇವರ ಅಧ್ಯಕ್ಷತೆಯಲ್ಲಿ ಹಮ್ಮಿಕೊಂಡಿದ್ದರು.

ಚಿಂತನಾ ದಿನಾಚರಣೆ ಬಗ್ಗೆ ಶ್ರೀ ಜಿ.ಎ. ನರಗುಂದ ಎಲ್.ಟಿ.(ಸ್ಕೌ) ಶ್ರೀಮತಿ ಸುಮಾ ಗರಗ ಡಿ.ಸಿ.(ಗೈ) ಶ್ರೀಮತಿ ವಿಜಯಲಕ್ಷ್ಮೀ ಅಂಗಡಿ ಉಪಾಧ್ಯಕ್ಷರು ಜಿ. ಸಂಸ್ಥೆ ಶ್ರೀಮತಿ ನಾಗರತ್ನ ಮುಳಗುಂದ ಉ.ಅ. ಜಿ.ಸಂ. ಶ್ರೀ. ಡಿ.ವ್ಹಿ ಬೆಲ್ಲದ ಜಿ. ಆ. (ಸ್ಕೌ) ಮಾತನಾಡಿದರು. ಸಭೆಯಲ್ಲಿ ಶ್ರೀ ಎಮ್.ಎಸ್. ಹಿರೇಮಠ. ಕೋಶಾಧ್ಯಕ್ಷರು. ಜಿ. ಸಂ. ಗದಗ. ಶ್ರೀಮತಿ ಜಿ.ಎ. ಹಲಸೂರ, ಡಿ.ಟಿ.ಸಿ. (ಗೈ) ಶ್ರೀ ಎಸ್.ಕೆ. ಮಾತಾಡ್, ಜಿಲ್ಲಾ ಸ್ಕೌಟರ್, ಶ್ರೀ ಬಿ.ಎ. ವಸ್ತ್ರದ, ಡಿ.ಓ.ಸಿ. 50 ಸ್ಕೌಟ್ಸ್, 60 ಗೈಡ್ಸ್‌ಗಳು ಭಾಗವಹಿಸಿದ್ದರು.

## ಬಳ್ಳಾರಿ

### ಲಾರ್ಡ್ ಬೇಡನ್ ಪೋವೆಲ್ ಜನ್ಮ ದಿನಾಚರಣೆ

ಸಿರುಗುಪ್ಪ ತಾಲೂಕು ವತಿಯಿಂದ ಲಾರ್ಡ್ ಬೇಡನ್ ಪೋವೆಲ್‌ರವರ ಜನ್ಮ ದಿನಾಚರಣೆ ಅಂಗವಾಗಿ ದಿನಾಂಕ: 22-2-2010 ರಂದು ಎಸ್.ಇ.ಎಸ್. ಬಾಲಕಿಯರ ಪ್ರೌಢಶಾಲೆ ಸಿರುಗುಪ್ಪದಲ್ಲಿ ತಾಲೂಕು ಮಟ್ಟದ ಮಕ್ಕಳ ಮೇಳವನ್ನು ಆಯೋಜಿಸಲಾಗಿತ್ತು. ಶ್ರೀ ಎಂ.ಎಸ್. ಸೋಮಲಿಂಗಪ್ಪ ಶಾಸಕರು ವಿಧಾನಸಭಾ ಕ್ಷೇತ್ರ ಸಿರುಗುಪ್ಪ ಇವರು ಸ್ಕೌಟ್ಸ್ - ಗೈಡ್ಸ್ ಮಕ್ಕಳ ಮೇಳವನ್ನು ಉದ್ಘಾಟಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಮಂಚಾಲಯ್ಯ ಅಧ್ಯಕ್ಷರು ಪುರಸಭೆ ಸಿರುಗುಪ್ಪ ಇವರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಡಿ.ಎ. ತಿಮ್ಮಣ್ಣ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಿರುಗುಪ್ಪ, ಶ್ರೀ ಎಸ್. ಅರ್ಜುನ್ ಕಾಳಪ್ಪ ಕ್ಷೇತ್ರ ಸಮನ್ವಯಾಧಿಕಾರಿಗಳು, ಕಾರ್ಯದರ್ಶಿ ಮತ್ತು ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ದೊಡ್ಡನಗೌಡರ್ ಉಪಸ್ಥಿತರಿದ್ದರು. ತಾಲೂಕಿನ ವಿವಿಧ ಶಾಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್ ದಳಗಳ ಸುಮಾರು 200ಕ್ಕೂ ಮೇಲ್ಪಟ್ಟು ಮಕ್ಕಳು ಹಾಜರಿದ್ದರು. ಸ್ವಾಗತವನ್ನು ಶ್ರೀ ನಟರಾಜ ಸ್ಕೌಟ್ ಮಾಸ್ಟರ್ ಮಾಡಿದರು. ವಂದನಾರ್ಪಣೆಯನ್ನು ಶ್ರೀಮತಿ ಶಿವಲೀಲಾ ಮಾಡಿದರು.

ದಿನಾಂಕ: 4-3-2010 ರಂದು ಬಳ್ಳಾರಿ ಜಿಲ್ಲೆಯ ರಾಷ್ಟ್ರಪತಿ ಸ್ಕೌಟ್ಸ್ ಗೈಡ್ಸ್‌ಗಳು ಸಭೆ ಸೇರಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡರು. ಸಭೆಯ ಅಧ್ಯಕ್ಷತೆಯನ್ನು ಮಾನ್ಯ ಶ್ರೀ ಆರ್. ವೆಂಕಣ್ಣ ಜಿಲ್ಲಾ ಮುಖ್ಯ ಆಯುಕ್ತರು ವಹಿಸಿಕೊಂಡು ಕಾರ್ಯಕ್ರಮ ನೆರವೇರಿಸಿದರು. ಶ್ರೀ ಆರ್. ವೆಂಕಣ್ಣ, ಜಿಲ್ಲಾ ಮುಖ್ಯ ಆಯುಕ್ತರು - ಗೌರವ ಅಧ್ಯಕ್ಷರು, ಡಾ|| ಆಶಾರಾಣಿ, ಮೆಡಿಕಲ್ ಆಫೀಸರ್ ವಿಮ್ಸ್ ಆಸ್ಪತ್ರೆ ಬಳ್ಳಾರಿ - ಅಧ್ಯಕ್ಷರು, ಡಾ|| ವಿದ್ಯಾ, ಮೆಡಿಕಲ್ ಆಫೀಸರ್ - ಖಜಾಂಚಿ, ಶ್ರೀ ಸಿ. ಬಾಲಾಜಿ, ಮಾಲೀಕರು ವೇಣುಗೋಪಾಲ್ ಸ್ಟೋರ್ಸ್, ಬೆಂಗಳೂರು ರೋಡ್ - ಕಾರ್ಯದರ್ಶಿ

ಜುಲೈ 2010 ರಲ್ಲಿ ಕ್ಯಾನ್ಸರ್ ಡಿಟೆಕ್ಷನ್ ಶಿಬಿರವನ್ನು ನಡೆಸಬೇಕೆಂದು ತೀರ್ಮಾನಿಸಲಾಯಿತು. ಉಳಿದ ನೂರಾರು ಪ್ರೆಸಿಡೆಂಟ್ ಸ್ಕೌಟ್ಸ್-ಗೈಡ್ಸ್ ಗಳನ್ನು ಈ ಸಂಸ್ಥೆಯ ಸದಸ್ಯರಾಗಿ ನೋಂದಾಯಿಸಿಕೊಳ್ಳಲು ಪತ್ರ ವ್ಯವಹಾರ ಮಾಡಬೇಕೆಂದು ತೀರ್ಮಾನಿಸಲಾಯಿತು. ಕೊಟ್ಟೂರು ಪಟ್ಟಣ ಪಂಚಾಯ್ತಿಯ ವತಿಯಿಂದ ಕೊಟ್ಟೂರು ಟೌನಿನಲ್ಲಿ ಕೆಲವು ಶಾಲೆಗಳಿಗೆ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳಿಗೆ ಸಮವಸ್ತ್ರವನ್ನು ವಿತರಿಸಿರುವರು.

| | | | | |
|---|---|---|---|---|
| 1) ಎಲ್.ಬಿ. ಬಡಾವಣೆ ಪ್ರಾಥಮಿಕ ಶಾಲೆ | ಸ್ಕೌಟ್ಸ್ | – | 10 | ವಿದ್ಯಾರ್ಥಿಗಳು, |
| 2) ಜೆ.ಪಿ. ನಗರ ಪ್ರಾಥಮಿಕ ಶಾಲೆ | ಗೈಡ್ಸ್ | – | 15 | " |
| 3) ಕೆ.ಟಿ.ಕೆ. ಗೌಡ ಪ್ರಾಥಮಿಕ ಶಾಲೆ | ಗೈಡ್ಸ್ | – | 15 | " |
| 4) ನಾಗರಾಜ ಶಾಲೆ ಪ್ರಾಥಮಿಕ | ಸ್ಕೌಟ್ಸ್-ಗೈಡ್ಸ್ | – | 15 | " |
| 5) ಸರಕಾರಿ ಪ್ರಾಥಮಿಕ ಶಾಲೆ, ಗಜ್ಜಿನ ಮರ | ಸ್ಕೌಟ್ಸ್ | – | 15 | " |
| | | | ಒಟ್ಟು 70 | |



Scout **SHAFFI P. RAJASAB,** 8th Std of M.D.R. High School Bellary Secured First Prize in the Taluk Level Quiz Competition in Bellary, organized by **Reserve Bank of India**, Bangalore, as part of RBI Platinum jubilee- Celebrations (2009-2010) Financial Literacy Project.

# ಬಾಗಲಕೋಟೆ



## ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನಾಚರಣೆ

ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಬಾಗಲಕೋಟೆ ಆಶ್ರಯದಲ್ಲಿ ವಿಶ್ವ ಸ್ಕೌಟ್ ದಿನ ಹಾಗೂ ಚಿಂತನಾ ದಿನವನ್ನು ದಿನಾಂಕ : 22-2-2010ರಂದು ಜಿಲ್ಲಾ ಕೇಂದ್ರ ಕಚೇರಿಯಲ್ಲಿ ಆಚರಿಸಲಾಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಮಂಗಳಖೋಡ, ಉಪಪ್ರಾಚಾರ್ಯರು ಬಾಲಕಿಯರ ಪ.ಪೂ. ಕಾಲೇಜು ಬಾಗಲಕೋಟ ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಬಸವೇಶ್ವರ ಪ್ರೌಢಶಾಲೆಯ ಸ್ಕೌಟ್ಸ್ ಮಾಸ್ಟರ್ ರಾದ ಶ್ರೀ ಡಿ.ವ್ಹಿ. ಶಿಕ್ಕೇರಿ ಸ್ಕೌಟ್ಸ್ ಮಕ್ಕಳೊಂದಿಗೆ ಭಾಗವಹಿಸಿದ್ದರು. ಸರ್ಕಾರಿ ಬಾಲಕಿಯರ ಪ.ಪೂ. ಕಾಲೇಜಿನ ರೇಂಜರ್ ಲೀಡರರಾದ ಶ್ರೀಮತಿ ಸರಸ್ವತಿ ಕೇಲೂರ ರೇಂಜರ್ಸ್ ಮಕ್ಕಳೊಂದಿಗೆ ಭಾಗವಹಿಸಿದ್ದರು ಹಾಗೂ ನವನಗರ ಎಲ್.ಪಿ.ಎಸ್. ನಂ. 6 ರ ಬುಲ್ ಬುಲ್ ಮಕ್ಕಳೊಂದಿಗೆ ಗೈಡ್ ಕ್ಯಾಪ್ಟನ್‌ರಾದ ಶ್ರೀಮತಿ ಪಿ.ಜಿ. ಬಂದಿಕೇರಿ ಸರ್ವಧರ್ಮ ಪ್ರಾರ್ಥನೆ ಹಾಗೂ ಸ್ವಾಗತ ಕಾರ್ಯಕ್ರಮವನ್ನು ನೆರವೇರಿಸಿ ಕೊಟ್ಟರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎಂ.ಎಂ. ಹಳ್ಳೂರ ಕಾರ್ಯಕ್ರಮ ನಿರೂಪಿಸಿದರು. ಕೊನೆಯದಾಗಿ ವಂದನಾರ್ಪಣೆಯನ್ನು ಶ್ರೀ ಎ.ಎಸ್. ಶಿವಕುಮಾರ್ ಎಎಸ್.ಓ.ಸಿ. ರವರು ಮಾಡಿದರು.

"ಸ್ಕೌಟ್ ಮತ್ತು ಗೈಡ್ ಚಳುವಳಿ ಮತ್ತು ಕುಷ್ಠರೋಗದ ಬಗ್ಗೆ ಅರಿವು ಮೂಡಿಸಲು ರೋವರ್ಸ್‌ಗಳ ಸೈಕಲ್ ಜಾಥಾ"

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮುದ್ದೆಬಿಹಾಳದ ಸುಭಾಸಚಂದ್ರಬೋಸ್ ರೋವರ್ ತಂಡದ ನಾಲ್ಕು ರೋವರ್ಸ್‌ಗಳು ಸ್ಕೌಟ್ ಮತ್ತು ಗೈಡ್ ಚಳುವಳಿಯ ಬಗ್ಗೆ ಮತ್ತು ಕುಷ್ಠರೋಗದ ಬಗ್ಗೆ ಅರಿವು ಮೂಡಿಸುವ ಬಗ್ಗೆ ಸೈಕಲ್ ಜಾಥಾವನ್ನು ಹಮ್ಮಿಕೊಂಡು ಬಾಗಲಕೋಟೆ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಪ್ರಾಥಮಿಕ ಶಾಲೆ ಹಾಗು ಪ್ರೌಢ ಶಾಲೆಗಳಿಗೆ ಬೇಟಿ ನೀಡಿದ್ದರು. ಜಿಲ್ಲಾ ಆಯುಕ್ತರು ಶ್ರೀ ಜಿ.ಬಿ. ಇದ್ದಲಗಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಸಿ.ಎ. ಸಾವಳಗಿ, ಜಿಲ್ಲಾ ಸಂಘಟನಾ ಆಯುಕ್ತರು ಶ್ರೀ ಎಂ.ಎಸ್. ಶಿವುಕುಮಾರ ಇವರುಗಳು ಮಾರ್ಗದರ್ಶನ ನೀಡಿದರು.

# ಮೈಸೂರು

## ಸ್ಕೌಟ್ ಗೈಡಿನ ತೃತೀಯ ಸೋಪಾನ ಕಬ್ ಬುಲ್ ಬುಲ್‌ನ ತೃತೀಯ ಚರಣ್/ಸುವರ್ಣ ಪಂಕ್ ಶಿಬಿರ

ದಿನಾಂಕ 20-2-09 ಮತ್ತು 21-2-09 ರ ವರೆವಿಗೆ ಸ್ಕೌಟ್ ಗೈಡ್ ನ ತೃತೀಯ ಸೋಪಾನ ಕಬ್ ಬುಲ್ ಬುಲ್‌ನ ಸುವರ್ಣ ಪಂಕ್, ತರಬೇತಿ ಶಿಬಿರ ಜರುಗಿತು. ಸ್ಕೌಟ್ ವಿಭಾಗಕ್ಕೆ ಶ್ರೀ ಅಜಯ್ ಕುಮಾರ್ ಜೈನ್, ಹೆಚ್.ಡಬ್ಲ್ಯೂ.ಬಿ. (ಎಸ್) ಗೈಡ್ ವಿಭಾಗಕ್ಕೆ ಶ್ರೀಮತಿ ಸುಜಯ, ಹೆಚ್.ಡಬ್ಲ್ಯೂ.ಬಿ. (ಗೈ) ಬುಲ್‌ಬುಲ್ ವಿಭಾಗಕ್ಕೆ ಶ್ರೀಮತಿ ನಾಗರತ್ನಮ್ಮ, ಕಬ್ ವಿಭಾಗಕ್ಕೆ ಶ್ರೀಮತಿ ಅಮೃತಮ್ಮ ನಾಯಕರಾಗಿ ಕಾರ್ಯನಿರ್ವಹಿಸಿದರು. ಸುಮಾರು 650 ಮಕ್ಕಳು ಭಾಗವಹಿಸಿದ್ದರು.

## ಜಿಲ್ಲಾ ಮೇಳ ಹಾಗೂ ಚಿಂತನಾ ದಿನ

ದಿನಾಂಕ 21-2-2010 ಮತ್ತು 22-2-2010ರಂದು ಜಿಲ್ಲಾ ಮೇಳ ಮತ್ತು ಸ್ಥಾಪಕರ ದಿನ ಹಮ್ಮಿಕೊಳ್ಳಲಾಗಿತ್ತು. ದಿನಾಂಕ 21-2-2010 ರಂದು ಸಾಂಸ್ಕೃತಿಕ ಕಾರ್ಯಕ್ರಮ ಜರುಗಿತು. ದಿನಾಂಕ 22-2-2010 ರಂದು ಬೆಳಗ್ಗೆ ಸರ್ವಧರ್ಮ ಪ್ರಾರ್ಥನೆ. ಜರುಗಿತು. ಬೆಳಗ್ಗೆ 10 ಗಂಟೆಗೆ ಜಿಲ್ಲಾ ಮೇಳ ಉದ್ಘಾಟನೆಗೊಂಡಿತು. ಶ್ರೀ ಪುರುಷೋತ್ತಮ್, ಮೈಸೂರಿನ ಮೇಯರ್ ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಶ್ರೀ ಅಬ್ದುಲ್ ಸಮೀರ್ ಜಿಲ್ಲಾ ಕಾರ್ಯದರ್ಶಿ ಸ್ವಾಗತ ಮಾಡಿದರು. ಶ್ರೀ ಚನ್ನಬಸಪ್ಪ, ಡಿ.ಹೆಚ್.ಕ್ಯೂ.(ಎಸ್.) ರವರು ವಂದನೆ ಸಲ್ಲಿಸಿದರು. ಧ್ವಜಸ್ತಂಭ ರಚನೆ, ಚಿತ್ರ ಬಿಡಿಸುವುದು, ರಸಪ್ರಶ್ನೆ, ಸಾಹಸಮಯ ಚಟುವಟಿಕೆ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಎರಡು ಸಾವಿರ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್ಸ್ ಭಾಗವಹಿಸಿದ್ದರು. ಈ ಮೇಳಿನ ಕಾರ್ಯಗಳಲ್ಲಿ ಶ್ರೀ ಜಗದೀಶ್, ಡಿ.ಟಿ.ಸಿ.(ಎಸ್.) ಶ್ರೀಮತಿ, ಶಾಂತಗಿರಿಯಪ್ಪ, ಡಿ.ಟಿ.ಸಿ. (ಗೈ.) ಶ್ರೀಮತಿ ಅಮೃತಮ್ಮ, ಶ್ರೀ ಅಮರ್‌ನಾಥ್, ಶ್ರೀಮತಿ ಸುಜಯ, ಶ್ರೀ ಅಜಯ್ ಕುಮಾರ್ ಜೈನ್, ಡಾ. ಪಿ.ವಿ. ರತ್ನಅರಸ್, ಎ.ಎಸ್.ಸಿ. (ಗೈ) ಹಾಗೂ ಇನ್ನಿತರರೆಲ್ಲರೂ ಸಕ್ರಿಯವಾಗಿ ಭಾಗವಹಿಸಿದ್ದರು.

## ಬಿಜಾಪುರ



ರಾಷ್ಟ್ರದ ಭದ್ರತೆಗಾಗಿ ಹಾಗೂ ಸುರಕ್ಷತೆಗಾಗಿ ದೇಶದ ಪ್ರತಿಯೊಂದು ಮಗು ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಸೇರುವುದು ಕಡ್ಡಾಯವೆಂದು ವಿದ್ಯುತ್ ನಿಗಮದ ಅಧ್ಯಕ್ಷರು ಹಾಗೂ ಶಾಸಕರಾದ ಎಸ್.ಕೆ. ಬೆಳ್ಳುಬ್ಬಿ ಅವರು ಹೇಳಿದರು.

ಅವರು ವಿಜಾಪುರ ದರಬಾರ ಪ್ರೌಢಶಾಲಾ ಮೈದಾನದಲ್ಲಿ ನಡೆದ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಾಪಕರ ದಿನಾಚರಣೆ ಹಾಗೂ ಜಿಲ್ಲಾ ರ್‍ಯಾಲಿ ಉದ್ಘಾಟಿಸಿ ಮಾತನಾಡಿದರು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ನಗರ ಶಾಸಕರಾದ ಅಪ್ಪಾಸಾಹೇಬ. ಪಟ್ಟಣಶೆಟ್ಟಿ ಮಾತನಾಡಿ ಸ್ಕೌಟ್ಸ್ ಮತ್ತು ಗೈಡ್ಸ್ ಒಂದು ಮಿಲಿಟರಿ ಪಡೆ ಇದ್ದ ಹಾಗೆ. ಅದರ ತತ್ವ ಸಿದ್ಧಾಂತಗಳು ನಮ್ಮ ಜೀವನದಲ್ಲಿ ಅಳವಡಿಸಿಕೊಂಡರೆ ನಮ್ಮ ಜೀವನ ಸಾರ್ಥಕವಾಗುವುದು. ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಚಿನ್ನಸ್ವಾಮಿ ರೆಡ್ಡಿ ಸ್ಕೌಟ್ಸ್ ಸ್ಥಾಪಕರಾದ ಬೇಡನ್ ಪೋವೆಲ್‌ರ ಬಗ್ಗೆ ಉಪನ್ಯಾಸ ನೀಡಿದರು. ನಾಗಠಾಣ ಮತಕ್ಷೇತ್ರದ ಶಾಸಕರಾದ ವಿಠ್ಠಲ, ಕಟಕಧೋಂಡ ಮಾತನಾಡಿ, ಸ್ಕೌಟ್ಸ್ ಮೌಲ್ಯಗಳನ್ನು ಬೆಳೆಸುವ ಕೇಂದ್ರವಾಗಿದ್ದು, ಅದರ ಬೆಳವಣಿಗೆಗಾಗಿ ನಾನು ಸಂಪೂರ್ಣ ಸಹಕಾರ ನೀಡುತ್ತೇನೆ ಎಂದರು. ಜಿಲ್ಲಾ ಪಂಚಾಯತ ಅಧ್ಯಕ್ಷರಾದ ಸೋಮನಾಥ. ಬಾಗಲಕೋಟ ಅವರು ಮಾತನಾಡಿದರು. ರ್‍ಯಾಲಿಯ ನಾಯಕರಾದ ಜಗದೀಶ, ಬೋಳಸೂರ ಪ್ರಾಸ್ತಾವಿಕ ಮಾತನಾಡಿದರು.

ಜ್ಞಾನಯೋಗಾಶ್ರಮದ ಶಾಂತಮಲ್ಲಿಕಾರ್ಜುನ ಮಹಾಸ್ವಾಮಿಗಳು ಸಾನಿಧ್ಯ ವಹಿಸಿ ಆಶೀರ್ವಚನ ನೀಡಿದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಜಿ.ಎಸ್. ಪರಮಶಿವಪ್ಪ ಮಾತನಾಡಿ ಇದೊಂದು ಹಬ್ಬವೆಂದು ಬಣ್ಣಿಸಿದರು. ಪ್ರಧಾನ ಆಯುಕ್ತರಾದ ಡಾ|| ಸತೀಶ ಜಿಗಜಿನ್ನಿ, ಸಹಜಾನಂದ ದಂದರಗಿ, ಜಿಲ್ಲಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಎಸ್.ಎಸ್. ಬೇವನೂರ, ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಭಾಗ್ಯಶ್ರೀ. ಸಿಂದಗಿಕರ ಸ್ವಾಗತಿಸಿದರು. ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಜಿ.ಎಸ್. ಪರಮಶಿವಪ್ಪ ವಂದಿಸಿದರು.

## ಉಡುಪಿ

### ಮಂಗಳೂರು ವಿಶ್ವವಿದ್ಯಾನಿಲಯ ಮಟ್ಟದ ರೋವರ್ಸ್-ರೇಂಜರ್ಸ್ ಸಮಾಗಮ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉಡುಪಿ ಜಿಲ್ಲಾ ಸಂಸ್ಥೆಯ ವತಿಯಿಂದ ಮಣಿಪಾಲ ಮಾಧವ ಪೈ ಸ್ಮಾರಕ ಕಾಲೇಜು, ಮಣಿಪಾಲ ಇವರ ಅತಿಥ್ಯದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯ ಮಟ್ಟ ರೋವರ್ಸ್-ರೇಂಜರ್ಸ್ ಸಮಾಗಮವನ್ನು ದಿನಾಂಕ 27-2-2010 ರಿಂದ 28-2-2010 ರ ವರೆಗೆ ಸಂಘಟಿಸಲಾಯಿತು.

ಶಿಬಿರದ ಉದ್ಘಾಟನಾ ಸಮಾರಂಭವು ಉಡುಪಿಯ ಮಾನ್ಯ ಶಾಸಕರಾದ ಶ್ರೀ ಕೆ. ರಘುಪತಿ ಭಟ್ ರವರ ಅಧ್ಯಕ್ಷತೆಯಲ್ಲಿ ಜರುಗಿತು. ಮಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರೊ. ಕೆ.ಕೆ. ಆಚಾರ್ಯ ಅವರು ದೀಪ ಬೆಳಗಿಸಿ ಉದ್ಘಾಟಿಸಿದರು. ರಾಜ್ಯ ಗೈಡ್ಸ್ ಆಯುಕ್ತರಾಗಿ ನಿಯೋಜನೆಗೊಂಡ ಶ್ರೀಮತಿ ಶಾಂತಾ ವಿ. ಆಚಾರ್ಯ, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರು ಶ್ರೀ ಪಿ. ರಬೀಂದ್ರ ನಾಯಕ್ ಮುಖ್ಯ ಅತಿಥಿಗಳಾಗಿ ಮಾತನಾಡಿದರು. ಶ್ರೀ ಎ.ಎಂ. ಶಂಕರ್ ಲೀಡರ್ ಟ್ರೈನರ್ಸ್ (ರೋವರ್ಸ್) ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ, ಜಿಲ್ಲಾ ಆಯುಕ್ತರು (ಗೈಡ್ಸ್) ಇವರುಗಳು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಪಿ. ದಯಾನಂದ್ ಶೆಟ್ಟಿ ಪ್ರಾಂಶುಪಾಲರು ಮಾಧವ ಪೈ ಸ್ಮಾರಕ ಕಾಲೇಜು, ಮಣಿಪಾಲ ಇವರು ಸ್ವಾಗತಿಸಿದರು. ಶ್ರೀ ಶೇಖರ್ ಪೂಜಾರಿ ಜಿಲ್ಲಾ ಕಾರ್ಯದರ್ಶಿ ಧನ್ಯವಾದ ನೀಡಿದರು. ರೋವರ್ ಲೀಡರ್ ಶ್ರೀ ಡೊಂಬಯ್ಯ ಇವರು ಶಿಬಿರದ ಮುನ್ನೋಟ ನೀಡಿದರು. ಕು. ಜ್ಯೋತಿ ಆಚಾರ್ಯ ರೇಂಜರ್ ಲೀಡರ್ ಕಾರ್ಯಕ್ರಮ ನಿರ್ವಹಿಸಿದರು.

ಸಮಾಗಮದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯ ಮಟ್ಟದ 10 ಕಾಲೇಜುಗಳಿಂದ 175 ರೋವರ್ಸ್-ರೇಂಜರ್ಸ್, ಪ್ರಾಧ್ಯಾಪಕರು ಭಾಗವಹಿಸಿದ್ದರು, ವಿವಿಧ ಸಂಪನ್ಮೂಲ ವ್ಯಕ್ತಿಗಳಿಂದ ತರಬೇತಿ ನೀಡಲಾಯಿತು. ಡಾ. ಗಣಪತಿ ಭಟ್ ಕಮಾಂಡೆಂಟ್, ಹೋಮ್ ಗಾರ್ಡ್, ಉಡುಪಿ ಇವರ ನಾಯಕತ್ವದಲ್ಲಿ ನಾಗರೀಕ ರಕ್ಷಣೆ ಬಗ್ಗೆ ಪ್ರಾತ್ಯಕ್ಷಿಕೆಯೊಂದಿಗೆ ತರಬೇತಿ ನೀಡಿದರು. ಡಾ. ಶಾಮ್ ಸುಂದರ್ ರವರು ಪ್ರಥಮ ಚಿಕಿತ್ಸೆ ಬಗ್ಗೆ, ಮೇಜರ್ ರಾಧಾಕೃಷ್ಣ ಹಾಸ್ಯ ಯೋಗದ ಬಗ್ಗೆ ತರಬೇತಿ ನೀಡಿದರು. ಜೇಸಿ ಮಣಿಪಾಲ



ಹೀಲ್ಸ್ ಇವರ ಸಹಕಾರದಲ್ಲಿ ಉಚಿತ ಆರೋಗ್ಯ ತಪಾಸಣಾ ಶಿಬಿರ ಮಣಿಪಾಲ ಅನಂತನಗರದಲ್ಲಿ ಸಂಘಟಿಸಲಾಯಿತು. ಸಾಹಸಮಯ ಚಾರಣ, ಸಿಂಡ್ ಬ್ಯಾಂಕ್ ವತಿಯಿಂದ ನಡೆದ ಮ್ಯಾರಥಾನ್, ಸರ್ವಧರ್ಮ ಪ್ರಾರ್ಥನೆ, ಶಿಬಿರಾಗ್ನಿ, ಕಾರ್ಯಕ್ರಮಗಳು ಉತ್ತಮವಾಗಿ ಮೂಡಿಬಂತು. ಶ್ರೀ ಬಿ.ಜಿ. ವಾರಂಬಳ್ಳಿ ಎಲ್.ಟಿ.(ಸ್ಕೌಟ್ಸ್), ಶ್ರೀ ಬಿ. ಸದಾಶಿವ ಭಟ್, ಎಲ್,ಟಿ.(ಸ್ಕೌಟ್ಸ್), ಶ್ರೀ ಕೊಗ್ಗ ಗಾಣಿಗ, ಎಲ್.ಟಿ. (ಸ್ಕೌಟ್ಸ್) ಶ್ರೀ ಗೋಪಾಲಕೃಷ್ಣ, ಜಿಲ್ಲಾ ಸಂಘಟಕರು ದ.ಕ.ಜಿಲ್ಲೆ, ಶ್ರೀ ವಿಕ್ಟೋರಿಯಾ ವೇಗಸ್, ಗೈಡ್ ಕ್ಯಾಪ್ಟನ್ ಇವರುಗಳು ಸಹಕರಿಸಿದರು.

ಶಿಬಿರದ ಸಮಾರೋಪ ಸಮಾರಂಭ ಶ್ರೀ ಟಿ. ಸುಧಾಕರ ಪೈ ಅಧ್ಯಕ್ಷರು ಕರ್ಲಾನ್ ಲಿಮಿಟೆಡ್ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಹೆರ್ಗದಿನಕರ ಶೆಟ್ಟಿ ಅಧ್ಯಕ್ಷರು ನಗರ ಸಭೆ ಉಡುಪಿ, ಶ್ರೀ ದೇವೇಂದ್ರ ಪ್ರಭು ನಗರ ಸಭಾ ಸದಸ್ಯರು, ಶ್ರೀ ಐ.ಎ. ಕೈರನ್ನ, ಸಹಾಯಕ ರಾಜ್ಯ ಆಯುಕ್ತರು (ಸ್ಕೌಟ್ಸ್) ಮೈಸೂರು ವಿಭಾಗ. ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಕೆ.ಬಿ. ರಾವ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ ಜಿಲ್ಲಾ ಆಯುಕ್ತರು (ಗೈಡ್ಸ್) ಡಾ. ಮಾಧವ ಭಟ್ ಸ್ಥಾನೀಯ ಆಯುಕ್ತರು (ರೋವರ್ಸ್) ದ.ಕ.ಜಿಲ್ಲೆ, ಇವರುಗಳು ಉಪಸ್ಥಿತರಿದ್ದರು. ಶ್ರೀ ಪಿ. ದಯಾನಂದ್ ಶೆಟ್ಟಿ ಪ್ರಾಂಶುಪಾಲರು ಮತ್ತು ಸ್ಥಾನೀಯ ಆಯುಕ್ತರು(ಸ್ಕೌಟ್ಸ್) ಧನ್ಯವಾದ ನೀಡಿದರು. ಶ್ರೀ ಡೊಂಬಯ್ಯ ಇವರು ಶಿಬಿರದ ವರದಿ ನೀಡಿದರು. ಶ್ರೀ ಶಿವಣ್ಣ ಬಾಯಾರ್ ಸ್ಕೌಟ್ ಮಾಸ್ಟರ್ ಇವರು ಕಾರ್ಯಕ್ರಮ ನಿರ್ವಹಿಸಿದರು.

## ಸ್ಕೌಟ್ಸ್ - ಗೈಡ್ಸ್ ರ್‍ಯಾಲಿ, ಕಬ್ - ಬುಲ್ ಬುಲ್ ಉತ್ಸವ ಸ್ಥಾಪಕರ ದಿನಾಚರಣೆ ಮತ್ತು ಚಿಂತನಾ ದಿನಾಚರಣೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಸ್ಥಳೀಯ ಸಂಸ್ಥೆಯ ವತಿಯಿಂದ 22-2-2010 ರಂದು ಮಣ್ಣಪಳ್ಳ ಆರೋಗ್ಯಧಾಮ, ಮಣಿಪಾಲದಲ್ಲಿ ನಡೆದ ಸ್ಕೌಟ್ಸ್-ಗೈಡ್ಸ್ ರ್‍ಯಾಲಿ, ಕಬ್ ಬುಲ್ ಬುಲ್ ಉತ್ಸವ ಸ್ಥಾಪಕರ ದಿನಾಚರಣೆ ಕಾರ್ಯಕ್ರಮವನ್ನು ಉದ್ಘಾಟಿಸಿ ಉಡುಪಿ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿ ಡಿ. ಮಂಜುನಾಥಯ್ಯ ಅವರು ಮಾತನಾಡಿದರು ಹಾಗು ಸ್ಥಾಪಕರಾದ ಬೇಡನ್ ಪಾವೆಲ್‌ರವರು ಸ್ಕೌಟ್ಸ್ - ಗೈಡ್ಸ್ ಗಳಿಗೆ ನೀಡಿದ ಅಂತಿಮ ಸಂದೇಶದ ಪ್ರತಿಗಳನ್ನು ಬಿಡುಗಡೆಗೊಳಿಸಿದರು.

ಕಾರ್ಯಕ್ರಮದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಪಿ. ರಬೀಂದ್ರ ನಾಯಕ್ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ನಿವೃತ್ತ ವಿಂಗ್ ಕಮಾಂಡರ್ ಭೋಜರಾಜ್ ಭಾಗವಹಿಸಿ ಘನ ವಂದನೆಯನ್ನು ಸ್ವೀಕರಿಸಿದರು. ಶ್ರೀ ವಿ.ಜಿ. ಬೈಕಾಡಿ ಇವರು ಸ್ಕೌಟ್ಸ್-ಗೈಡ್ಸ್ ಸ್ಥಾಪಕರ ಸಂಸ್ಮರಣೆಯನ್ನು ಮಾಡಿದರು. ಶ್ರೀ ಮಧುಕರ್ ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿ ಬ್ರಹ್ಮಾವರ, ಶ್ರೀ ಕೆ.ಬಿ. ರಾವ್ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಡ್ವಿನ್ ಆಳ್ವ ಜಿಲ್ಲಾ ಆಯುಕ್ತರು(ಸ್ಕೌಟ್ಸ್), ಶ್ರೀಮತಿ ರಾಜಲಕ್ಷ್ಮೀ ಡಿ.ಶೆಟ್ಟಿ ಜಿಲ್ಲಾ ಆಯುಕ್ತರು(ಗೈಡ್ಸ್) ಹೆಡ್ ಕ್ವಾರ್ಟರ್ಸ್ ಕಮಿಷನರ್ ಶ್ರೀ ದಯಾನಂದ್ ಶೆಟ್ಟಿ, ಶ್ರೀ ಬಿ.ಜಿ. ವಾರಂಬಳ್ಳಿ, ರೊ. ಗೋಪಿನಾಥ್ ರಾವ್ ಇವರುಗಳು ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಶೇಖರ್ ಪೂಜಾರಿ ಜಿಲ್ಲಾ ಕಾರ್ಯದರ್ಶಿ ಸ್ವಾಗತಿಸಿದರು. ಶ್ರೀ ಎಂ. ಪ್ರಭಾಕರ್ ಭಟ್ ಧನ್ಯವಾದ ನೀಡಿದರು. ಉಡುಪಿ ಸ್ಥಳೀಯ ಶಾಲೆಗಳ 650 ಸ್ಕೌಟ್ಸ್-ಗೈಡ್ಸ್, ಕಬ್, ಬುಲ್ ಬುಲ್ಸ್, ಮಣಿಪಾಲ ಮಾಧವ ಪೈ ಸ್ಮಾರಕ ಪ್ರಥಮ ದರ್ಜೆ ಕಾಲೇಜು ಇಲ್ಲಿಯ ರೋವರ್ಸ್-ರೇಂಜರ್ಸ್ ವಿದ್ಯಾರ್ಥಿಗಳು, ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

## ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ರ್‍ಯಾಲಿ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉಡುಪಿ ಜಿಲ್ಲಾ ರ್‍ಯಾಲಿಯು ಕುಂದಾಪುರ ಸ್ಥಳೀಯ ಸಂಸ್ಥೆಯ ಸಹಯೋಗದಿಂದೊಂದಿಗೆ ಜಿ.ಪ. ಹಿ.ಪ್ರಾ.ಶಾಲೆ ಕಾಳಾವರ ಇವರ ಆತಿಥ್ಯದಲ್ಲಿ ದಿನಾಂಕ 19-2-2010 ರಿಂದ 20-2-2010 ರ ವರೆಗೆ ಜಿಲ್ಲಾ ರ್‍ಯಾಲಿ ಸಂಘಟಿಸಲಾಯಿತು. ಕುಂದಾಪುರದ ಶಾಸಕ ಶ್ರೀ ಶ್ರೀನಿವಾಸ ಶೆಟ್ಟಿ ಇವರು ಹಸಿರು ನಿಶಾನೆ ತೋರಿಸುವ ಮೂಲಕ ನಗರ ಮೆರವಣಿಗೆಯನ್ನು ಉದ್ಘಾಟಿಸಿದರು. ಅಂದು ಬೆಳಗ್ಗೆ ಧ್ವಜ ವಂದನೆ ಮೂಲಕ ಭಾಗವಹಿಸಿದ್ದ ಸುಮಾರು 1000 ಸ್ಕೌಟ್ಸ್-ಗೈಡ್ಸ್‌ಗಳು ಕರಕುಶಲ ವಸ್ತು ತಯಾರಿ, ಬಿ.ಪಿ.ಯವರ ಚಿತ್ರ ರಚನೆ, ಮುಖವಾಡ, ಬೀಸಣಿಗೆ, ಸುಧಾರಿತ ವಾದ್ಯ, ಗುಡಾರ, ರಾಷ್ಟ್ರ ನಾಯಕರ ವೇಷ, ಗ್ರೀಟಿಂಗ್ ಕಾರ್ಡ್, ಪ್ರಥಮ ಚಿಕಿತ್ಸೆ, ಪಟಾಲಾಂ ಧ್ವಜ, ಪ್ರಕೃತಿ ಚಿತ್ರ ರಚನೆ, ಶಿಬಿರ ಉಪಕರಣ ತಯಾರಿ, ಧಾನ್ಯಗಳಿಂದ ರಂಗೋಲಿ, ಕಲ್ಲುಗಳಿಂದ ಭಾರತ ನಕ್ಷೆ ತಯಾರಿ ಮುಂತಾದ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು.

4.30ಕ್ಕೆ ವಿಧಾನ ಪರಿಷತ್ ಸದಸ್ಯ ಶ್ರೀ ಕೋಟ ಶ್ರೀನಿವಾಸ್ ಪೂಜಾರಿಯವರು, ಶ್ರೀಮತಿ ಚಂದ್ರಾವತಿ ಹೆಗ್ಡೆ ಗ್ರಾಮ ಪಂಚಾಯತ್ ಅಧ್ಯಕ್ಷರು ಇವರ ಅಧ್ಯಕ್ಷತೆಯಲ್ಲಿ ರ್‍ಯಾಲಿ ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಸುಜಾತಾ ವಾಸುದೇವ (ಜಿ.ಪಂ ಸದಸ್ಯರು), ಶ್ರೀಮತಿ ಶಶಿಕಲಾ (ತಾ.ಪಂ. ಸದಸ್ಯರು), ಶ್ರೀ ರಾಜು ದೇವಾಡಿಗ, ಶ್ರೀ ಎಸ್. ದಿನಕರ ಶೆಟ್ಟಿ ಶ್ರೀ ಎಡ್ವಿನ್ ಆಳ್ವ, ಶ್ರೀಮತಿ ಗುಣರತ್ನ, ಶ್ರೀ ಶೇಖರ್ ಪೂಜಾರಿ, ಶ್ರೀ ಸದಾರಾಮ ಶೆಟ್ಟಿ, ಶ್ರೀ ವಿ.ಕೆ. ಮೋಹನ್, ಶ್ರೀ ಎಂ. ಪ್ರಭಾಕರ್ ಭಟ್, ಶ್ರೀಮತಿ ಪ್ಲೋರಿನ್ ನೊರೊನ್ಹಾ ಸ್ಥಳೀಯ ಕಾರ್ಯದರ್ಶಿ ಉಪಸ್ಥಿತರಿದ್ದರು. ರ್‍ಯಾಲಿ ನಾಯಕ ಶ್ರೀ ಬಿ. ಆನಂದ ಅಡಿಗ ಪ್ರಾಸ್ತಾವಿಕ ಮಾತಿನೊಂದಿಗೆ ರ್‍ಯಾಲಿಯ ಪಕ್ಷಿನೋಟ ನೀಡಿದ್ದು, ರಾತ್ರಿ 8.30ಕ್ಕೆ ನಿವೃತ್ತ ಸಹಾಯಕ ವಿದ್ಯಾಧಿಕಾರಿ ಶ್ರೀ ರಾಜೀವ ಶೆಟ್ಟಿ ಭವ್ಯ ಶಿಬಿರಾಗ್ನಿ ಉದ್ಘಾಟಿಸಿದರು. 20-2-2010 ರ ಪೂರ್ವಾಹ್ನ ಸರ್ವಧರ್ಮ ಪ್ರಾರ್ಥನೆಯು ನಡೆಯಿತು. 9.15 ಕ್ಕೆ ಕುಂದಾಪುರದ ಉಪನಿರೀಕ್ಷಕರು ಶ್ರೀ ಬಿ.ಎಸ್. ಸತೀಶ್ ಗೌರವ ರಕ್ಷೆ ಸ್ವೀಕರಿಸಿದರು. ಅತಿಥಿಗಳಾಗಿ ಎ.ಎಸ್.ಐ. ಶ್ರೀ ಸುಭಾಸ್ ಹಾಗೂ ನಿವೃತ್ತ ಉಪನ್ಯಾಸಕ ಶಂಕರ್ ರಾವ್ ಕಾಳಾವರ ಉಪಸ್ಥಿತರಿದ್ದರು. 10.30ಕ್ಕೆ ಕಬ್ ಬುಲ್ ಬುಲ್ ಉತ್ಸವದ ಉದ್ಘಾಟನೆಯನ್ನು ಶ್ರೀ ಕೆ.ಎಸ್. ಚಂದ್ರಶೇಖರ ಶೆಟ್ಟಿ ಉಪಾಧ್ಯಕ್ಷರು ಕರ್ನಾಟಕ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಬೆಂಗಳೂರು ಇವರು, ಶ್ರೀಮತಿ ಹರಿಣಿ ಮುಖ್ಯ ಶಿಕ್ಷಕರು ಸರಕಾರಿ ಪ್ರೌಢಶಾಲೆ ಕಾಳಾವರ ಇವರ ಅಧ್ಯಕ್ಷತೆಯಲ್ಲಿ ನೆರವೇರಿಸಿದರು. ಅತಿಥಿಗಳಾಗಿ ಶ್ರೀ ಚಂದ್ರಶೇಖರ್ ಹೆಗ್ಡೆ ಅಭಿವೃದ್ಧಿ ಅಧಿಕಾರಿ ಓರಿಯಂಟಲ್ ಇನ್ಶೂರೆನ್ಸ್ - ಸಳ್ವಾಡಿ ಉಪಸ್ಥಿತರಿದ್ದರು. ಸಂಜೆ ನಡೆದ ಸಮಾರೋಪದಲ್ಲಿ ಕುಂದಾಪುರದ ವಿಧನ ಪರಿಷತ್ ಸದಸ್ಯ ಶ್ರೀ ಪ್ರತಾಪಚಂದ್ರ ಶೆಟ್ಟಿ, ಶ್ರೀ ಬೈಂದೂರು ಶಾಸಕ ಶ್ರೀ ಕೆ. ಲಕ್ಷ್ಮೀನಾರಾಯಣ ಅಧ್ಯಕ್ಷತೆ ವಹಿಸಿದ್ದರು.

ಇದೇ ಸಂದರ್ಭದಲ್ಲಿ ಸ್ಕೌಟ್ಸ್ ಗೈಡ್ಸ್ ನಲ್ಲಿ ಉನ್ನತ ತರಬೇತಿ ಮುಗಿಸಿದ ಶ್ರೀ ಹೆಚ್. ಆರ್. ಸತೀಶ್, ಸ್ಕೌಟ್ ಮಾಸ್ಟರ್ ಹಾಗೂ ಕು. ಹೇಮಾ, ಗೈಡ್ ಕ್ಯಾಪ್ಟನ್ ಇವರಿಗೆ ಹಿಮಾಲಯ ವುಡ್ ಬ್ಯಾಡ್ಜ್ ಪದಕ ನೀಡಲಾಯಿತು. ಶಾಲಾ ಮುಖ್ಯೋಪಾಧ್ಯಾಯ ಶ್ರೀ ಕೆ. ಎನ್. ಚಂದ್ರಶೇಖರ ಶೆಟ್ಟಿ ಸ್ವಾಗತಿಸಿ, ಶ್ರೀಮತಿ ಪ್ಲೋರಿನ್ ನೊರೊನ್ಹಾ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಧನ್ಯವಾದ ನೀಡಿದರು.

## ರಾಯಚೂರು

ದಿನಾಂಕ: 21-2-2010 ರಂದು "ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಂಸ್ಥೆ ಶಿಸ್ತಿನ ಸಿಪಾಯಿಯಂತೆ, ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಪೂರಕ, ಶಿಕ್ಷಣದ ಅವಿಭಾಜ್ಯ ಅಂಗ, ಶಿಸ್ತಿಲ್ಲದ ಜೀವನ ಅರ್ಥಹೀನ" ಎಂದು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀಮತಿ ಆರ್. ಇಂದಿರಾ ಅಭಿಪ್ರಾಯ ಪಟ್ಟರು. ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸ್ಥಾಪಕ ಬೇಡನ್ ಪಾವೆಲ್ ಅವರ ಹುಟ್ಟು ಹಬ್ಬದ ಅಂಗವಾಗಿ ಶನಿವಾರದಂದು ಹಮ್ಮಿಕೊಂಡಿದ್ದು ಜಿಲ್ಲಾ ಮಟ್ಟದ ರ್‍ಯಾಲಿಯನ್ನು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತಿದ್ದರು.

ನಗರದ ಕೆ.ಇ.ಬಿ. ಪ್ರೌಢ ಶಾಲಾ ಆವರಣದಲ್ಲಿ ಸಂಜೆ ರ್‍ಯಾಲಿ ಕಾರ್ಯಕ್ರಮ ಜರುಗಿತು. ಈ ಸಂದರ್ಭದಲ್ಲಿ ಜಿಲ್ಲಾ ಆಯುಕ್ತ ಆರ್. ನರಸಿಂಹಮೂರ್ತಿ ಅತಿಥಿಗಳನ್ನು ಸ್ವಾಗತಿಸುವ ಮೂಲಕ ಪ್ರಾಸ್ತಾವಿಕ ಮಾತನಾಡಿದರು. ಅಧ್ಯಕ್ಷತೆ ವಹಿಸಿದ್ದ ಕೆ. ತಿಮ್ಮಯ್ಯ ಅವರು ಬೇಡನ್ ಪಾವೆಲ್ ಅವರ ಜೀವನ ಮತ್ತು ಸಾಧನೆ ಹಾಗೂ ಸೌಜನ್ಯ ಧ್ಯೇಯೋದ್ದೇಶ ಕುರಿತು ಮಾತನಾಡಿದರು. ವಿವಿಧ ತಾಲೂಕುಗಳಿಂದ 650 ಕ್ಕಿಂತಲೂ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು. ಜಿಲ್ಲಾ ಆಯುಕ್ತೆ ಶ್ರೀಮತಿ ಅಜೀಜಾ ಬೇಗಂ, ಶ್ರೀಮತಿ ಲಲಿತಾ ಬಸವನಗೌಡ ಉಪಸ್ಥಿತರಿದ್ದರು. ಅಮರೇಗೌಡ ಪಾಟೀಲ್ ನಿರೂಪಿಸಿದರು. ರಾವುತ್ ರಾವ್ ಬರೂರ ವಂದಿಸಿದರು.





ದಿನಾಂಕ 21-2-2010 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪಕ ಬೇಡನ್ ಪಾವೆಲ್ ಅವರ ಜನ್ಮದಿನದ ಅಂಗವಾಗಿ ಪಥಸಂಚಲನೆ ಕಾರ್ಯಕ್ರಮ ಜರುಗಿತು.

ಬೆಳಗ್ಗೆ ನಿಡೆ ಪಥಸಂಚಲನೆ ಕಾರ್ಯಕ್ರಮವನ್ನು ಜಿಲ್ಲಾ ನ್ಯಾಯಾಧೀಶ ಎನ್. ಬಿ. ಕುಲಕರ್ಣಿ ಹಸಿರು ನಿಶಾನೆ ತೋರಿಸುವುದರ ಮೂಲಕ ಚಾಲನೆ ನೀಡಿದರು. ಅವರನ್ನು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ ಸ್ವಾಗತಿಸಿದರು.

## ಹಾಸನ



ಶ್ರೀ ವೆಂಕಟೇಶ್ವರ ಎಜುಕೇಷನ್ ಟ್ರಸ್ಟ್ (ರಿ.) ಚಿಟ್ಟನಹಳ್ಳಿ ಹೌಸಿಂಗ್ ಬೋರ್ಡ್ ಹೊಳೆನರಸೀಪುರ ಟೌನ್ ಈ ಸಂಸ್ಥೆಯಲ್ಲಿ ದಿನಾಂಕ: 22-2-2010 ರಂದು ಸಾಧನ ಗೈಡ್ಸ್ ಕಂಪನಿಯ ಉದ್ಘಾಟನಾ ಸಮಾರಂಭವನ್ನು ಹಾಗೂ ಬೇಡನ್ ಪೋವೆಲ್‌ರ ಜನ್ಮದಿನಾಚರಣೆಯನ್ನು ಗೈಡ್ಸ ಕ್ಯಾಪ್ಟನ್‌ರವರಾದ ಶ್ರೀಮತಿ ಆರ್. ಕುಮುದಾರವರ ನೇತೃತ್ವದಲ್ಲಿ ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀಯುತ ಹೆಚ್.ವಿ. ರವಿಕುಮಾರರವರು ವಹಿಸಿಕೊಂಡಿದ್ದರು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಸಾಧನ ಗೈಡ್ಸ ಕಂಪನಿಗೆ ಶುಭ ಹಾರೈಸಿದರು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಪ್ರಕಾಶ್ ಎಂ.ಎಸ್. ರವರು ತಮ್ಮ ಮುಖ್ಯ ಅತಿಥಿಗಳ ಭಾಷಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಉಗಮವಾದುದ್ದರ ಬಗ್ಗೆ ರೋಚಕ ಘಟನೆಗಳನ್ನು ಹೇಳದರು. ಅದೆ ರೀತಿ ಈ ಕಾರ್ಯಕ್ರಮದ ಅತಿಥಿಗಳಾಗಿ ಆಗಮಿಸಿದ್ದ ಸ್ಕೌಟ್ ಮಾಸ್ಟರ್ ಶ್ರೀ ಮಹೇಶ್ ಅವರು ಸ್ಕೌಟ್ ಮತ್ತು ಗೈಡ್ಸ್‌ನ ಪ್ರಯೋಜನಗಳೇನು ಎಂಬುದರ ಬಗ್ಗೆ ವಿವರವಾಗಿ ತಿಳಿಸಿದರು.

ಎಸ್.ವಿ.ಇ.ಟಿ. ಸಂಸ್ಥೆಯ ಸಲಹೆಗಾರರಾದ ಶ್ರೀ ಅರುಣ ಕುಮಾರರವರು. ಮುಖ್ಯೋಪಾಧ್ಯಾಯರಾದ ಶ್ರೀ ಚಂದ್ರಶೇಖರ್, ಬಿ.ಎಸ್ ರವರು ಸಹ ಶಿಕ್ಷಕರು ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

## Bangalore South



**HAL Rover Crew, observed the World Scout and Thinking Day on 22nd February 2010 at their office premises**

**Sri M.M. Bebrata Chief of Security and Fire and Officer in charge of HAL Rover Crew Sri M.K. Khan, Dist, Chief Commissioner, were the guests. Sri Mahesh Angadi, Organising Secretary& Sri Maheshwaran Treasurer of HAL Employees Association were present Sri. P. Nandakumar, Rover Scout Leader Co-ordinated the Programme**

*Wake Up! Get Busy ! You have*
*only one life - day to live,*
*So make the best of every minute of it.*
*- Lord Baden Powell*

# BANGALORE NORTH



## Gone Home

**LT. Col. V.C. Haridev Katkar**, Vice President & Former District Commissione (Scout), Bangalore North passed away on 17th February 2010 at his Residence, Bangalore at the age of 83 after a brief illness. He is survived by his Wife and three Sons.

He Served the Movement in Karnataka for over 60 Years. in different levels. He was a Social Worker. He was awarded the prestigious National Award Silver Star by the National Headquarters, New Delhi, during the Year 2007.

LT. Col. V.C. Haridev Katkar received the Silver Star Award from H.E. Sri T.N. Chaturvedi, The then Governor of Karnataka at Rajbhavan, Bangalore

---

## ಬೆಳಗಾಂ

ಸವದತ್ತಿ :

ದಿನಾಂಕ : 8-2-2010 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದ ಸಭಾಭವನದಲ್ಲಿ ತಾಲೂಕು ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಎಸ್.ಸಿ. ಕರಿಕಟ್ಟಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಸವದತ್ತಿ ವಹಿಸಿದ್ದರು. ಶ್ರೀ ಡಿ.ಎಂ. ಬೆಟಗೇರಿ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಸವದತ್ತಿ, ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಒಟ್ಟು 70 ಶಿಕ್ಷಕರು ಭಾಗವಹಿಸಿದ್ದರು.

ದಿನಾಂಕ 20-2-2010 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಹಾಗೂ ಸ್ಥಳೀಯ ಸಂಸ್ಥೆ ಸವದತ್ತಿ ಇವರ ಸಂಯುಕ್ತ ಆಶ್ರಯದಲ್ಲಿ ಸವದತ್ತಿ ವಲಯ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ನಡೆಸಲಾಯಿತು. ಮೇಳದ ಉದ್ಘಾಟನೆಯನ್ನು ಶ್ರೀ ಎಸ್.ಜಿ. ಶಿಂತ್ರೆ, ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಸವದತ್ತಿ ಇವರು ಜ್ಯೋತಿ ಬೆಳಗುವುದರೊಂದಿಗೆ ನೆರವೇರಿಸಿದರು. ಶ್ರೀ ಜೆ.ಜಿ. ಹಂಪನ್ನವರ, ಉಪಾಧ್ಯಕ್ಷರು, ಸ್ಥಳೀಯ ಸಂಸ್ಥೆ ಸವದತ್ತಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಡಿ.ಎಮ್. ಬೆಟಗೇರಿ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಸವದತ್ತಿ. ಈ ಸಂದರ್ಭದಲ್ಲಿ ಮಕ್ಕಳಿಂದ ಸಾಂಸ್ಕೃತಿ ಕಾರ್ಯಕ್ರಮಗಳು ಜರುಗಿದವು. 200 ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು 40 ಸ್ಕೌಟರ್ಸ್ -ಗೈಡರ್ಸ್ ಭಾಗವಹಿಸಿದ್ದರು.

ಮೂಡಲಗಿ :

ದಿನಾಂಕ : 10-2-2010 ರಂದು ಮೂಡಲಗಿ, ಇಲ್ಲಿ ಮೂಡಲಗಿ ವಲಯದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಅಜಿತ ಮಣ್ಣಿಕೇರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹಾಗೂ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಮೂಡಲಗಿರವರು ವಹಿಸಿದ್ದರು. ಶ್ರೀ ವಿ.ಆರ್. ದೇವರೆಡ್ಡಿ, ರಾಜ್ಯಸಂಸ್ಥೆಯ ಕಾರ್ಯಕಾರಿ ಸಮಿತಿ ಸದಸ್ಯರು ಮೂಡಲಗಿರವರು, ಶ್ರೀ ಮಹಾಲಿಂಗಪುರ. ಉಪಾಧ್ಯಕ್ಷರು ಕರ್ನಾಟಕದ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಮೂಡಲಗಿರವರು. ಉಪಸ್ಥಿತರಿದ್ದರು.

ಗೋಕಾಕ್ :

ದಿನಾಂಕ 17-2-2010 ರಂದು ಎನ್.ಇ.ಎಸ್. ಶಾಲೆ ಸಭಾಭವನ ಗೋಕಾಕ್ ಇಲ್ಲಿ ಗೋಕಾಕ್ ವಲಯದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಗಜಾನನ ವಿ. ಮಣ್ಣಿಕೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಗೋಕಾಕರವರು ವಹಿಸಿದ್ದರು. ಶ್ರೀ ಸುಳ್ಳಗಾವಿ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಗೋಕಾಕ್ ರವರು ಉಪಸ್ಥಿತರಿದ್ದರು. ಒಟ್ಟು 72 ಸ್ಕೌಟರ್ಸ್ ಗೈಡರ್ಸ್ ಶಿಕ್ಷಕರು ಭಾಗವಹಿಸಿದ್ದರು.

ಬೆಳಗಾವಿ ನಗರ :



ದಿನಾಂಕ 19-2-2010 ರಂದು ಮರಾಠಾ ಮಂಡಳ ಶಾಲೆಯ ಸಭಾಭವನ ಬೆಳಗಾವಿ ನಗರ ಇಲ್ಲಿ ಬೆಳಗಾವಿ ನಗರ ವಲಯದ ಪ್ರಾಥಮಿಕ ಶಾಲೆಗಳ ಮುಖ್ಯೋಪಾಧ್ಯಾಯರ ಸಭೆಯನ್ನು ಶ್ರೀ ಎ.ಬಿ. ಪುಂಡಲೀಕ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಬೆಳಗಾವಿ ನಗರ ಇವರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗಿತ್ತು. ಸದರಿ ಸಭೆಯಲ್ಲಿದ್ದ ಮುಖ್ಯೋಪಾಧ್ಯಾಯರಿಗೆ ಶ್ರೀ ನಾಗೇಶ ಆರ್. ಶಿವಪೂರ, ಎ.ಎಸ್.ಓ.ಸಿ. ಸ್ಕೌಟ್ಸ್ ಮತ್ತು ಗೈಡ್ಸ್ ಬಗ್ಗೆ ಮಾಹಿತಿ ನೀಡಿದರು. ಈ ಸಂದರ್ಭದಲ್ಲಿ ಶ್ರೀ ಕಾಂಬಳೆ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷರು. ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಮಂಜುನಾಥ ಜಿಲ್ಲಾ ಸಂಘಟಕರು ಬೆಳಗಾವಿ ಉಪಸ್ಥಿತರಿದ್ದರು.

ದಿನಾಂಕ -24-2-2010 ರಂದು ಡಿ.ಪಿ. ಪ್ರೌಢಶಾಲೆ ಬೆಳಗಾವಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ಆಚರಿಸಲಾಯಿತು. ಶ್ರೀ ವಿ.ಎಂ. ಪಾಟೀಲ ಉಪ ನಿರ್ದೇಶಕರು ಸಾ.ಶಿ. ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಕಾರ್ಯಕ್ರಮಕ್ಕೆ ಶೋಭೆ ತಂದುಕೊಟ್ಟರು.

ಶ್ರೀ ಎ.ಬಿ. ಪುಂಡಲೀಕ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸಹಾಯಕ ಜಿಲ್ಲಾ ಸ್ಕೌಟ್ಸ್ ಆಯುಕ್ತರು ಬೆಳವಾಗಿ ನಗರ ಇವರು ಮೇಳದ ನೇತೃತ್ವನ್ನು ವಹಿಸಿ ಕಾರ್ಯಕ್ರಮದ ಯಶಸ್ಸಿಗೆ ಶ್ರಮಿಸಿದರು.

ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ ಬೆಳಗಾವಿ ಶ್ರೀ ಎಸ್.ಎಂ. ನದಾಫ್, ಕಾರ್ಯದರ್ಶಿ ಬೆಳಗಾವಿ ನಗರವಲಯ ಸಂಸ್ಥೆ ಸಿಸ್ಟರ್ ಮೇರಿ ಅಬ್ರಹಾಂ. ಮುಖ್ಯೋಪಾಧ್ಯಾಯರು, ಡಿ.ಪಿ. ಶಾಲೆ, ಬೆಳಗಾವಿ ಸಮಾರಂಭದಲ್ಲಿ ಉಪಸ್ಥಿತರಿದ್ದರು. ಒಟ್ಟು 550 ಸ್ಕೌಟ್ಸ್ 4 ಗೈಡ್ಸ್ ಮಕ್ಕಳು, ಶಿಕ್ಷಕರು ಭಾಗವಹಿಸಿದ್ದರು.

ದಿನಾಂಕ 25-02-2010 ರಂದು ಶ್ರೀ ಬಿ.ಆರ್.ಸಿ. ಸಭಾಭವನದಲ್ಲಿ ನಗರವಲಯ ಬೆಳಗಾವಿಯ 100 ಶಿಕ್ಷಕ-ಶಿಕ್ಷಕಿಯರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಸಾಮಾನ್ಯ ಮಾಹಿತಿ ಶಿಬಿರವನ್ನು ನಡೆಸಲಾಯಿತು. ಈ ಮಾಹಿತಿ ಶಿಬಿರದ ಉದ್ಘಾಟನೆಯನ್ನು ಶ್ರೀ ಎ.ಬಿ. ಪುಂಡಲಿಕ ಕ್ಷೇತ್ರ ಶಿಕ್ಷಣಾಧಿಕಾರಿಗಳು ನಗರವಲಯ ಬೆಳಗಾವಿ ಇವರು ನಡೆಸಿಕೊಟ್ಟರು. ಶ್ರೀ ಕಾಂಬಳ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಬೆಳಗಾವಿ ಇವರು ಉಪಸ್ಥಿತರಿದ್ದರು.

ಬೈಲಹೊಂಗಲ :

ದಿನಾಂಕ 26-2-2010 ರಂದು ಸ.ಹಿ.ಪ್ರಾ.ಶಾಲೆ ನಂ. 1 ಬೈಲಹೊಂಗಲ ಇಲ್ಲಿ ಸ್ಕೌಟರ್ಸ್ -ಗೈಡರ್ಸ್ ಸಮಾವೇಶವನ್ನು ನಡೆಸಲಾಯಿತು ಶ್ರೀ ಎ.ಬಿ. ಇಂಗಳಗಿ, ಶಿಕ್ಷಣ ಸಂಯೋಜಕರು ಹಾಗೂ ಎ.ಡಿ.ಸಿ.(ಎಸ್.) ಬೈಲಹೊಂಗಲ ಸಮಾವೇಶದ ಅಧ್ಯಕ್ಷತೆ ವಹಿಸಿದ್ದರು. ಶ್ರೀ ನಾಯ್ಕರ್ ಮುಖ್ಯೋಪಾಧ್ಯಾಯರು ಸ.ಹಿ.ಪ್ರಾ. ಶಾಲೆ, ಶ್ರೀ ಎಸ್.ಎಸ್. ಬಳಗಾರ, ಕಾರ್ಯದರ್ಶಿ ಬೈಲಹೊಂಗಲ, ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ ಬೆಳಗಾವಿ. ಒಟ್ಟು 40 ಸ್ಕೌಟರ್ಸ್ 4 ಗೈಡರ್ಸ್ ಭಾಗವಹಿಸಿದ್ದರು.

ದಿನಾಂಕ 22-2-2010 ರಂದು ಸ.ಹಿ.ಪ್ರಾ. ಶಾಲೆ, ಬೆಳವಡಿ(ಮ) ತಾ|| ಬೈಲಹೊಂಗಲ ಇಲ್ಲಿ ಸಂಸ್ಥಾಪಕರ ದಿನಾಚರಣೆ ಆಚರಿಸಲಾಯಿತು.

ಶ್ರೀ ಎಂ.ಆರ್. ಪಾಟೀಲ ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಬೈಲಹೊಂಗಲ, ಶ್ರೀ ಬಿ.ಎ. ಉದ್ದುರಾಣಿ, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ (ದ) ಶ್ರೀ ಎ.ಐ. ಇಂಗಳಗಿ, ಶಿಕ್ಷಣ ಸಂಯೋಜಕರು ಮತ್ತು ಸಹಾಯಕ ಜಿಲ್ಲಾ ಸ್ಕೌಟ್ಸ್ ಆಯುಕ್ತರು ಬೈಲಹೊಂಗಲ. ಶಾಲೆಯ ಮುಖ್ಯೋಪಾಧ್ಯಾಯರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಶ್ರೀಮತಿ ಎಸ್.ಬಿ. ನರಗುಂದ, ಗೈಡರ್ ಶಿಕ್ಷಕಿ ಶ್ರೀ ರಾಜೇಶ್, ಸ್ಕೌಟ್ ಮಾಸ್ಟರ್ ಹಾಗೂ ಶಾಲೆಯ ಗುರುವೃಂದ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

ಕಾಗವಾಡ :

ದಿನಾಂಕ : 20-2-2010 ರಂದು ಕಾಗವಾಡ ವಲಯದ ಮಾಳೆ ಗ್ರಾಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ಹಮ್ಮಿಕೊಳ್ಳಲಾಗಿತ್ತು. ಮೇಳದ ಮುಖ್ಯ ಅತಿಥಿಗಳಾಗಿ ಡಾ|| ಏಕರೂಪ ಕೌರ್, ಭಾ.ಆ.ಸೇ. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ, ಮತ್ತು ಶ್ರೀ ಬರಮ ಗೌಡ, ಶಾಸಕರು ಕಾಗವಾಡ ಇವರುಗಳು ಆಗಮಿಸಿ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಣದ ಹಿರಿಮೆ ಕುರಿತು ಮಾತನಾಡಿದರು. ಶ್ರೀ ಶ್ರೀಶೈಲ್ ತೂಬಶೆಟ್ಟಿ, ಜಿಲ್ಲಾ ಪಂಚಾಯತ ಸದಸ್ಯರು ಮಾಳೆ ಇವರು ಮೇಳದ ಉದ್ಘಾಟನೆಯನ್ನು ನೆರವೇರಿಸಿ ಮೇಳದ ಯಶಸ್ಸಿಗೆ ಶ್ರಮಿಸಿದರು. ಶ್ರೀ ವಿ.ಜಿ. ಪೋಳ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಕಾಗವಾಡ ಇವರು. ಮೇಳದ ನೇತೃತ್ವವನ್ನು ವಹಿಸಿದ್ದರು. ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರು ಶಿಕ್ಷಣ ಸಂಯೋಜಕರು. ಸಿ.ಆರ್.ಪಿ., ಬಿ.ಆರ್.ಪಿ. ಸಂಯೋಜಕರು ಹಾಗೂ ಶ್ರೀ ಟಿ.ಡಿ. ಕಾಂಬೋಜಿ ಜಿಲ್ಲಾ ಕಾರ್ಯದರ್ಶಿ, ಬೆಳಗಾವಿ. ಶ್ರೀ ಆರ್.ಎ. ನಿಂಬಾಳಕರ ಜಿಲ್ಲಾ ಸ್ಕೌಟ್ ಆಯುಕ್ತರು, ಕಾಗವಾಡ ಗ್ರಾಮದ ಗಣ್ಯ ಮಾನ್ಯರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಪಥಸಂಚಲನ, ಸಾಂಸ್ಕೃತಿಕ ಕಾರ್ಯಕ್ರಮಗಳು ಮೇಳದಲ್ಲಿ ಆಕರ್ಷಕ ಚಟುವಟಿಕೆಗಳಾಗಿದ್ದವು 1500 ಸ್ಕೌಟರ್ಸ್ -ಗೈಡರ್ಸ್ ಹಾಗೂ ಶಿಕ್ಷಕರು ಭಾಗವಹಿಸಿದ್ದರು.

---



ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನಲ್ಲಿ ದಿನಾಂಕ 4-03-2010ರಿಂದ 5-03-2010ರವರೆಗೆ ನಡೆದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಆಯೋಜಿಸಿದ್ದ ಮೇಳದಲ್ಲಿ ಸುಮಾರು 400 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಶ್ರೀ ಜಯದೇವಪ್ಪ, ಜಿಲ್ಲಾ ಸ್ಥಾನಿಕ ಆಯುಕ್ತರು, ಶ್ರೀ ನಾಗೇಶ್ ಐತಾಳ್, ಶ್ರೀ ಅಂಗಡಿ ರೇವಣ್ಣ ಸಿದ್ದಪ್ಪ, ಶ್ರೀ ಗಡಿಗೆಪ್ಪ ವೈ.ಹೆಚ್, ಎಸ್ ಹೆಚ್. ಹಾಲಪ್ಪ ಹಾಗು ಸ್ಕೌಟ್ ಗೈಡ್ ನಾಯಕರುಗಳು ಭಾಗವಹಿಸಿದ್ದರು.

*It's no use standing still, It is one thing or the other, either progress or relax. Let us progress- and with a smile on.*

*- Baden Powell*

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227





A SMILE SAYS SUCCESS

A SMILE SAYS WELL - DONE

A SMILE SAYS I AM HAPPY

A SMILE SAYS SATISFACTION

A SMILE SAYS UNDERSTANDING

A SMILE SAYS SOMETHING

A SMILE SAYS THANK YOU

A SMILE SAYS AGREED

A SMILE SAYS CARING



God bless each day
of Your life
with happiness



Understanding is the
shortest distance
between two People




**ಸಂಚಿಕೆಯ ವಾರ್ಷಿಕ ಚಂದಾ ರೂ. 50/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು






ಶ್ರೀ ಬಿ.ಎಸ್. ಯಡಿಯೂರಪ್ಪ
ಸನ್ಮಾನ್ಯ ಮುಖ್ಯಮಂತ್ರಿಗಳು

# ಬಿಡಿಎ-ಆಧುನಿಕ ಬೆಂಗಳೂರಿನ ಶಿಲ್ಪಿ

ಬೆಂಗಳೂರು ಜಗತ್ತಿನಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ಕೆಲವೇ ಮಹಾ ನಗರಗಳಲ್ಲೊಂದು. 2021ರ ವೇಳೆಗೆ ಇಲ್ಲಿಯ ಜನಸಂಖ್ಯೆ 1 ಕೋಟಿ ತಲುಪಲಿದೆ. ಭಾರತದ ತಂತ್ರಜ್ಞಾನ ರಾಜಧಾನಿ, ಸಿಲಿಕಾನ್ ವ್ಯಾಲಿ ಬೆಂಗಳೂರು ರಾಷ್ಟ್ರದ ಆರ್ಥಿಕ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರ ವಹಿಸುತ್ತಿದೆ. ಬೆಂಗಳೂರಿನ ಈ ಭಾರೀ ಮುನ್ನಡೆಗೆ ಇಲ್ಲಿನ ಔದ್ಯಮಿಕ - ಬೌದ್ಧಿಕ ಸಾಮರ್ಥ್ಯಗಳು, ನಿರಂತರ ಪ್ರಗತಿಪರ ಖಾಸಗೀ, ಸರ್ಕಾರೀ ಕಾರ್ಯ ಚಟುವಟಿಕೆಗಳೇ ಕಾರಣ.

ಇಂದು ಅಂತರರಾಷ್ಟ್ರೀಯ ಮಹಾನಗರವಾಗುತ್ತಿರುವ ಬೆಂಗಳೂರಿನ ರಭಸದ ಬೆಳವಣಿಗೆಗೆ ಅಗತ್ಯವಾದ ಭಾರಿ ಪ್ರಮಾಣದ ವಸತಿ ಸೌಲಭ್ಯ, ರಸ್ತೆ, ಉತ್ತಮ ಸಾರಿಗೆ ವ್ಯವಸ್ಥೆ ಮೌಲ್ಯಾಧಾರಿತ ಸೇವೆ ಸೌಕರ್ಯಗಳನ್ನು ಒದಗಿಸುವ ಕಾರ್ಯಗಳು ನಿರಂತರವಾಗಿ ಅಷ್ಟೇ ರಭಸದಿಂದ ಸಾಗುತ್ತಿವೆ.

ಬೆಂಗಳೂರಿನ ಸಮರ್ಪಕ ಬೆಳವಣಿಗೆ, ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿಯೇ ಜನ್ಮ ತಳೆದ ಬಿಡಿಎ (ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ) ತನ್ನ 30 ವರ್ಷಗಳ ಸಾರ್ಥಕ ಜೀವನಾವಧಿಯಲ್ಲಿ ಮಹಾನಗರದ ಬೆಳವಣಿಗೆಗೆ ಹೊಸ ತಿರುವು ನೀಡಿ, ಬೆಂಗಳೂರಿನ ಸರ್ವಾಂಗೀಣ ಅಭಿವೃದ್ಧಿಯ ಆಧಾರ ಸ್ತಂಭವಾಗಿ ಬೆಳೆದು ನಿಂತಿದೆ.

## ವಸತಿ ಸೌಲಭ್ಯ ಪೂರೈಕೆಯಲ್ಲಿ ಬಿಡಿಎ ಇಷ್ಟು ವರ್ಷಗಳಲ್ಲಿ ಸಾಧಿಸಿರುವ ಅಪೂರ್ವ ಸಾಧನೆಗಳು.

- **ನಿರ್ಮಿಸಿರುವ ಬಡಾವಣೆಗಳು** - ಮಲ್ಲೇಶ್ವರಂ, ಬಸವನಗುಡಿ, ಮೊದಲ್ಗೊಂಡು ಏಷ್ಯದ ಅತಿದೊಡ್ಡ ಮತ್ತು ಅತ್ಯುತ್ತಮ ಯೋಜಿತ ಬಡಾವಣೆಗಳಾದ ಜಯನಗರ, ಕೋರಮಂಗಲ, ಬಿಟಿಎಂ, ಎಚ್‌ಎಸ್‌ಆರ್, ಆರ್‌ಎಂವಿ, ಇಂದಿರಾನಗರ, ಎಚ್‌ಬಿಆರ್, ವಿಜಯನಗರ, ಎಚ್‌ಆರ್‌ಬಿಆರ್, ಬಿಎಸ್‌ಕೆ ಬಡಾವಣೆಗಳು ಇತ್ತೀಚಿನ ಅರ್ಕಾವತಿ ಬಡಾವಣೆಯವರೆಗೆ ಸುಮಾರು 62 ಬಡಾವಣೆಗಳನ್ನು ರೂಪಿಸಿದೆ. ಇದರ ಮೂಲಕ ಸುಮಾರು 2 ಲಕ್ಷ ವಸತಿ ನಿವೇಶನಗಳನ್ನು ಸೃಷ್ಟಿಸಿದೆ.
- ನಗರದ ಸಮತೋಲನವಾದ ಬೆಳವಣಿಗೆಗೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ನಾಗರಿಕರ ಸೌಲಭ್ಯದ (ಸಿಎ) ನಿವೇಶನಗಳನ್ನು ರೂಪಿಸಿ ನಗರಕ್ಕೆ ಒಂದು ಹೊಸ ರೂಪ ಕೊಟ್ಟಿದೆ. ನ್ಯಾಷನಲ್ ಪಬ್ಲಿಕ್ ಸ್ಕೂಲ್, ಸೋಫಿಯಾ ಹೈಸ್ಕೂಲ್, ಪ್ರೆಸಿಡೆನ್ಸಿ ಸ್ಕೂಲ್, ಸ್ಟೆಲ್ಲಾ ಮೇರಿಸ್ ಸ್ಕೂಲ್, ಬೆಥಾನಿ ಸ್ಕೂಲ್ ಮುಂತಾದ ಹೆಸರಾಂತ ಶಾಲೆಗಳು ಹಾಗೂ ನ್ಯಾಷನಲ್ ಕಾಲೇಜ್, ಮೌಂಟ್ ಕಾರ್ಮೆಲ್ ಕಾಲೇಜ್, ವಿಜಯ ಕಾಲೇಜ್, ಜ್ಯೋತಿ ನಿವಾಸ್ ಕಾಲೇಜ್, ಎನ್‌ಐಎಫ್‌ಟಿ, ಐಎಸ್‌ಎಸ್ ಶಿಕ್ಷಣ ಸಂಸ್ಥೆಗಳು, ರಮಣ ಮಹರ್ಷಿ ಅಕಾಡೆಮಿ ಫಾರ್ ಬ್ಲೈಂಡ್, ಎನ್‌ಎಂಕೆಆರ್‌ವಿ ಮುಂತಾದ ಪ್ರತಿಷ್ಠಿತ ಕಾಲೇಜುಗಳಿಗೆ ನಿವೇಶನಗಳನ್ನು ಒದಗಿಸಿದೆ.
- ನಾಗರಿಕರ ಮನರಂಜನೆ, ಸೌಕರ್ಯ, ಆರೋಗ್ಯ, ಕಲೆ, ಸಾಹಿತ್ಯ, ಸಂಸ್ಕೃತಿಯ ಪ್ರವರ್ಧನೆಗೂ ಬಿಡಿಎ ಆದ್ಯತೆ ನೀಡಿದೆ. ಕ್ಲಬ್‌ಗಳು, ಅಂಚೆ ಕಚೇರಿಗಳು, ಕ್ರೀಡಾಂಗಣ, ರಂಗಮಂದಿರ ಆಸ್ಪತ್ರೆಗಳಿಗೆ ಸೂಕ್ತ ನಿವೇಶನ ನೀಡಿದೆ. ಮೋದಿ ಆಸ್ಪತ್ರೆ, ಬೆಂಗಳೂರು ಕಿಡ್ನಿ ಫೌಂಡೇಶನ್, ಬೆಂಗಳೂರು ವೈದ್ಯಕೀಯ ಮತ್ತು ಕ್ಯಾನ್ಸರ್ ಸಂಶೋಧನಾ ಕೇಂದ್ರ ಮುಂತಾದ ಆಸ್ಪತ್ರೆಗಳು, ಚೌಡಯ್ಯ ಸ್ಮಾರಕ ಭವನ, ರಂಗ ಶಂಕರ, ಲಲಿತಕಲಾ ಮಂದಿರದಂತಹ ಸಾಂಸ್ಕೃತಿಕ ಕೇಂದ್ರಗಳು ಮುಂತಾದವುಗಳು ಬಿಡಿಎ ರೂಪಿಸಿರುವ ಸಿಎ ನಿವೇಶನಗಳಲ್ಲಿ ತಲೆಯುತ್ತಿವೆ.

## ಪರಿಸರ ಕಾಳಜಿ

- ಎಲ್ಲಾ ವಸತಿ ಪ್ರದೇಶಗಳಲ್ಲಿ ಉದ್ಯಾನಗಳ ನಿರ್ಮಾಣ ಮತ್ತು ಬಯಲು ಸ್ಥಳಗಳ ಅನುಕೂಲಕ್ಕೆ ವ್ಯವಸ್ಥೆ.
- ಕೆರೆಗಳ ಸಂರಕ್ಷಣೆ - ನಗರದ ಸೌಂದರ್ಯ ಮತ್ತು ವಾತಾವರಣ ಕಾಪಾಡಲು ಪ್ರಯತ್ನ, ಲಾಲ್‌ಬಾಗ್, ಬೆನ್ನಿಗಾನಹಳ್ಳಿ ಮತ್ತು ಅಗರ ಕೆರೆಗಳ ನವೀಕರಣ ಮತ್ತು ನಿರ್ವಹಣೆ.

## ಮೂಲ ಸೌಕರ್ಯ ಅಭಿವೃದ್ಧಿಗೆ ಆದ್ಯ ಗಮನ

- ಇಂದಿರಾನಗರ, ಬನಶಂಕರಿ, ಎಚ್‌ಎಸ್‌ಆರ್ ಬಡಾವಣೆ, ಎಚ್‌ಬಿಆರ್ ಬಡಾವಣೆ ಮುಂತಾದ ವಿವಿಧ ಬಡಾವಣೆಗಳಲ್ಲಿ 15 ವಾಣಿಜ್ಯ ಸಂಕೀರ್ಣಗಳ ನಿರ್ಮಾಣ.
- ನಗರದ ವಾಹನ ಸಂಚಾರ ದಟ್ಟಣೆಯನ್ನು ತಪ್ಪಿಸಲು ಮತ್ತು ವಾಹನಗಳ ಸುಲಲಿತ ಸಂಚಾರಕ್ಕಾಗಿ ಹೊರ ವರ್ತುಲ ರಸ್ತೆ ನಿರ್ಮಾಣದ ಜೊತೆಗೆ ಹಲವಾರು ಸಂಚಾರ ವ್ಯವಸ್ಥೆ. ಡೈರಿ ವೃತ್ತ, ವೈಟ್‌ಫೀಲ್ಡ್ ರಸ್ತೆ, ಕೇಂದ್ರ ರೇಷ್ಮೆ ಮಂಡಳಿ, ಹೆಬ್ಬಾಳ, ಆನಂದರಾವ್ ವೃತ್ತ, ವಿಮಾನ ನಿಲ್ದಾಣ ರಸ್ತೆ ಮತ್ತು ಜಯದೇವ ಆಸ್ಪತ್ರೆ ಜಂಕ್ಷನ್‌ನಲ್ಲಿ ಏಳು ಹೊಸ ಗ್ರೇಡ್ ಸೆಪರೇಟರ್‌ಗಳ ನಿರ್ಮಾಣ.

## ವಿಶೇಷ ಚಟುವಟಿಕೆಗಳು

- ಬಿಡಿಎ ಆಧುನಿಕತೆಯ ವಾತಾವರಣಕ್ಕೆ ಸರಿಸಾಟಿಯಾಗಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಣೆ ಮಾಡುತ್ತಾ ಸಾಗಿದೆ. ಆರೋಗ್ಯ ಕ್ಷೇತ್ರಕ್ಕೂ ಅಡಿ ಇಟ್ಟಿದೆ. ಬೌರಿಂಗ್ ಆಸ್ಪತ್ರೆಯಲ್ಲಿ ಅಪಘಾತ ತುರ್ತು ಚಿಕಿತ್ಸಾ ವಿಭಾಗ ನಿರ್ಮಿಸಿದೆ.
- ಆಧುನಿಕ ಸ್ವರೂಪದ ತ್ಯಾಜ್ಯ ನೀರಿನ ಸಂಸ್ಕರಣಾ ಸ್ಥಾವರದ ಸ್ಥಾಪನೆ ಮೂಲಕ ಲಾಲ್‌ಬಾಗ್ ಮತ್ತು ಕಬ್ಬನ್ ಪಾರ್ಕ್‌ನಲ್ಲಿ ಮಾಲಿನ್ಯ ನೀರು ಶುದ್ದೀಕರಣದಲ್ಲಿ ಹೊಸ ಅಧ್ಯಯ ಆರಂಭಿಸಿದೆ.
- ಲಾಲ್‌ಬಾಗ್ ಗಾಜಿನ ಮನೆ ಮತ್ತು ಗಾಂಧಿ ಭವನವನ್ನು ನವೀಕರಿಸಿ ಐತಿಹಾಸಿಕ ಸ್ಮಾರಕಗಳ ಸಂರಕ್ಷಣಾ ಕಾರ್ಯಕ್ಕೂ ತನ್ನನ್ನು ತೊಡಗಿಸಿಕೊಂಡಿದೆ.

## ದೂರದೃಷ್ಟಿಯ ಯೋಜನೆಗಳು

- ಪೆರಿಫೆರಲ್ ವರ್ತುಲ ರಸ್ತೆ ನಿರ್ಮಾಣದ ಮೂಲಕ ಸಂಚಾರ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಪರಿವರ್ತನೆ ತರುವ ನಿಟ್ಟಿನಲ್ಲಿ ಬಿ.ಡಿ.ಎ. ಕಾರ್ಯೋನ್ಮುಖವಾಗಿದೆ.

## ನಗರದ ಸುತ್ತ ಹೊಸ ಬಡಾವಣೆಗಳು

- ನಗರದ ಹೊರವಲಯದಲ್ಲಿ ಸುಮಾರು 56 ಗ್ರಾಮಗಳನ್ನು ಒಳಗೊಂಡಂತೆ ಐದು ಪರಿಸರ ಸ್ನೇಹಿ ಬಡಾವಣೆ ನಿರ್ಮಿಸಲು ನಿರ್ಧರಿಸಿದೆ. ಭೂ ಮಾಲೀಕರ ಸಕ್ರಿಯ ಪಾಲ್ಗೊಳ್ಳುವಿಕೆ ಮತ್ತು ಸಹಕಾರದೊಡನೆ ಈ ಕಾರ್ಯ ಸಾಧನೆ.
- ಸಾರ್ವಜನಿಕರಿಗೆ ವಿವಿಧ ಅಳತೆಗಳ 90,000 ನಿವೇಶನಗಳ ಹಂಚಿಕೆಗೆ ಯೋಜನೆ.
- ಈಗಾಗಲೇ ಕೆಂಪೇಗೌಡ ಬಡಾವಣೆ ನಿರ್ಮಾಣದ ಪ್ರಕ್ರಿಯೆ ಆರಂಭವಾಗಿದೆ.

## ಕೆರೆಗಳ ಸಮಗ್ರ ಅಭಿವೃದ್ಧಿ

- ಕೆರೆಗಳ ಸಮಗ್ರ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಮತ್ತು ಜಿಲ್ಲಾ ಪಂಚಾಯತ್ ಒಟ್ಟು 12 ಕೆರೆಗಳನ್ನು ಬಿಡಿಎಗೆ ವಹಿಸಿದೆ. ಅಭಿವೃದ್ಧಿಪಡಿಸಲಾಗುವ ಕೆರೆಗಳು - ಉಲ್ಲಾಳ, ಮಲ್ಲತ್ತಹಳ್ಳಿ, ಕೊಮ್ಮಗಟ್ಟ, ರಾಮಸಂದ್ರ, ಜಕ್ಕೂರು, ಪಚೇನಹಳ್ಳಿ, ಸಂಪಿಗೆಹಳ್ಳಿ, ವೆಂಕಟೇಶ್‌ಪುರ, ಸೋಮಾಪುರ, ಕೋಣಸಂದ್ರ, ತಲಗಟ್ಟಪುರ ಮತ್ತು ಕೊತ್ತನೂರು ಕೆರೆಗಳು.

## ಪರಿಷ್ಕೃತ ಮಾಸ್ಟರ್ ಯೋಜನೆ 2015

- ಮುಂಬರುವ ಹತ್ತು ವರ್ಷಗಳಿಗೆ ಈ ಯೋಜನೆ. 1,219.50 ಚ.ಕಿ.ಮೀ.ಗಳ ಸ್ಥಳೀಯ ಯೋಜನಾ ಪ್ರದೇಶ ಈ ಯೋಜನೆಗೆ ಸೇರ್ಪಡೆ. ಗ್ರೇಟರ್ ಬೆಂಗಳೂರು ಪ್ರದೇಶವೂ ಇದಕ್ಕೆ ಸೇರ್ಪಡೆ.



**ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ**

ಟಿ. ಚೌಡಯ್ಯ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು-20
www.bdabangalore.org

ಬಿಡಿಎ ಮುಂದಾಳತ್ವದಲ್ಲಿ ಬೆಂಗಳೂರು ಅಭಿವೃದ್ಧಿ ಪಥದಲ್ಲಿ

Regd as News Paper (Magazine) No : CPMG/KA/BGW-549/2009-11 Permitted to Post under WPP System
Vide No.: WPP-87 of SSP, Bangalore West. Posted at: Mail Business Centre, Bangalore GPO on 30-03-2010




*Davanagere District Association of The Bharat Scouts and Guides, Karnataka released a Silver Coin on 21st March 2010 at Davanagere to Commemorate the Centenary Year of Scouting in India and Presented Silver Coin Memento to all the Unit Leaders of the District.*




## Social Service rendered by Scouts & Guides





Hassan



Udupi

Shimoga

## Rovers & Rangers in Action at Udupi District












Scouts & Guides of Mangalore visiting the Exhibition on Train Organized by Southern Railway State Bharat Scouts & Guides



## Yogasana by Scouts & Guides of Bagalkot District











If not delivered, please return to :
THE EDITOR, Karnataka Scout & Guide
State Headquarters, Kondajji Basappa Rd.
Prof. P. Sivashankar Circle, Fort
Bangalore - 560 002. Ph:26701227

Published for : The Bharat Scouts & Guides, Karnataka, State Headquarters, Fort, Bangalore - 560 002. by the State Secretary
Printed at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore-560 026.
visit our website "www.scout.org.in" for details of Scout/Guide activities & On-line Karnataka Scout & Guide Magazine